CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಜನವರಿ ೮, ೨೦೦೪ (ಪುಷ್ಯ ೧೮, ಶಕ ವರ್ಷ ೧೯೨೫) | ಸಂಚಿಕೆ ೨ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-6,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 29**
**ಪ್ರಕರಣದ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-26/2003, ದಿನಾಂಕ: 12ನೇ ಡಿಸೆಂಬರ್ 2003**

**ಅರ್ಜಿದಾರರು**

1) ಮುಯಿದಾ ಬೇಗಂ ಕೋಂ ಲೇಟ್ ಎನ್.ಆರ್. ಮುಬಾರಕ್ ಅಲಿ, ವಯಸ್ಸು ಸುಮಾರು 22 ವರ್ಷ.
2) ಮೊಹಮದ್ ಕಯೂಮ್ ಬಿನ್ ಲೇಟ್ ಎನ್.ಆರ್. ಮುಬಾರಕ್ ಅಲಿ, ವಯಸ್ಸು ಸುಮಾರು 3 ವರ್ಷ.

**ವಾಸ:** ಡಿ.ನಂ.60/1, 'ಡಿ' ಕ್ರಾಸ್, 1ನೇ ಮೈನ್, ಬಾಲಾಜಿನಗರ, ಬೆಂಗಳೂರು-29.

**ವಿರುದ್ಧ**

**ಪ್ರತಿವಾದಿಗಳು**

1) ಓರಿಯಂಟಲ್ ಇನ್ಸುರೆನ್ಸ್ ಕಂ. ಲಿ., ನಂ.19/1, 1ನೇ ಮಹಡಿ, 3ನೇ ಕ್ರಾಸ್, ಚಿಕ್ಕಣ್ಣ ಗಾರ್ಡನ್, ಶಂಕರಮಠ ಕಾಂಪೌಂಡ್, ಚಾಮರಾಜಪೇಟೆ, ಬೆಂಗಳೂರು-4.
2) ಎನ್.ಆರ್. ಶೇರ್ ಅಲಿ ಬಿನ್ ಎನ್.ಎಸ್. ಅಬ್ದುಲ್ ರಜಾಕ್, ನಂ.57/6, ಮಾಸ್ಕ್ ರಸ್ತೆ, ಓಲ್ಡ್ ಗುರಪ್ಪನ ಪಾಳ್ಯ, ಬೆಂಗಳೂರು-560029.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 6.9.2003 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಎನ್.ಆರ್. ಮುಬಾರಕ್ ಅಲಿ, ವಯಸ್ಸು ಸುಮಾರು 32 ವರ್ಷ ಅವರು ಮೇಲೆ ವಿಳಾಸಿಸಿರುವ 2 (ಎರಡನೇ) ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ ಒಂದು ಮತ್ತು ಎರಡನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಹೆಚ್.ಕೆ. ಷಣ್ಮುಖಪ್ಪ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-6, ಬೆಂಗಳೂರು.

ಪಿ.ಆರ್. 1372

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-6,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 29**
**ಪ್ರಕರಣದ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-1/2003, ದಿನಾಂಕ: 12ನೇ ಡಿಸೆಂಬರ್ 2003**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಅರ್ಜಿದಾರರು:
1) ಜಹಿರುನ್ನೀಸಾ 2) ಮಾ: ಮಜೀದ್, 13 ವರ್ಷ
3) ಕು: ತಾಸೀನ, 10 ವರ್ಷ, 4) ಕು: ಮಸ್ತಾನಿ, 7 ವರ್ಷ.
5) ಕು: ರೇಷ್ಮಾ, 4 ವರ್ಷ,
6) ಶ್ರೀಮತಿ ನಾದುನ್ನೀಸಾ, 55 ವರ್ಷ.
**ವಾಸ:** 33, ಕಾರ್ಪೋರೇಷನ್ ಕ್ವಾಟರ್ಸ್, ಕೋರಮಂಗಲ ಮುಖ್ಯ ರಸ್ತೆ, ಪೆಟ್ರೋಲ್ ಬಂಕ್ ಎದುರು, ಬೆಂಗಳೂರು-34.

ಪ್ರತಿವಾದಿಗಳು:
1) ಸಲೀಂಖಾನ್, ನಂ.71, ಈಸ್ಟ್ ಸ್ಟ್ರೀಟ್, ನೀಲಸಂದ್ರ, ಬೆಂಗಳೂರು-97.
2) ದಿ ನ್ಯೂ ಇಂಡಿಯಾ ಅಶ್ಯುರೆನ್ಸ್ ಕಂ. ಲಿ., 346, 2ನೇ ಮಹಡಿ, ಮನಾಡಿ ಕೋರ್ಟ್, 27ನೇ ಕ್ರಾಸ್, ಜಯನಗರ, 3ನೇ ಬ್ಲಾಕ್, ಬೆಂಗಳೂರು-11.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 1.1.2003 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ದಸ್ತಗಿರಿ ಭಾಷಾ, ವಯಸ್ಸು ಸುಮಾರು 38 ವರ್ಷ ಅವರು ಮೇಲೆ ವಿಳಾಸಿಸಿರುವ ಒಂದನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಹೆಚ್.ಕೆ. ಷಣ್ಮುಖಪ್ಪ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-6, ಬೆಂಗಳೂರು.

ಪಿ.ಆರ್. 1373

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-6,**
**ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 29**
**ಪ್ರಕರಣದ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-18/2002, ದಿನಾಂಕ: 12ನೇ ಡಿಸೆಂಬರ್ 2003**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಅರ್ಜಿದಾರರು:
1) ಶಹನಾಜ್ ಕೋಂ ಲೇಟ್ ಅಬ್ದುಲ್ ಜಬ್ಬಾರ್ ವಯಸ್ಸು ಸುಮಾರು 22 ವರ್ಷ.
2) ಕು: ಶಬರೀನಾ ಬಿನ್ ಲೇಟ್ ಅಬ್ದುಲ್ ಜಬ್ಬಾರ್ ವಯಸ್ಸು ಸುಮಾರು 1 ವರ್ಷ.
**ವಾಸ:** ನಂ.144, 6ನೇ 'ಎ' ಮುಖ್ಯ ಮಂಜುನಾಥ ಸ್ಟೋರ್ಸ್ ಹಿಂಭಾಗ, ಎಸ್.ಜಿ. ಹಳ್ಳಿ, 3ನೇ ಹಂತ, 3ನೇ ಬ್ಲಾಕ್, ಬಸವೇಶ್ವರನಗರ, ಬೆಂಗಳೂರು-79.

ಪ್ರತಿವಾದಿಗಳು:
1) ಶೇಕ್ ರಫೀಕ್ ಬಿನ್ ಶೇಕ್ ಇಬ್ರಾಹಿಂ, ನಂ.198, ಮಕಾಂ ಕಾಂಪೌಂಡ್, ಬೆಂಗಳೂರು-51.
2) ದಿ ಓರಿಯಂಟಲ್ ಇನ್ಸುರೆನ್ಸ್ ಕಂ. ಲಿ., ಯತಿರಾಜ ಮಠ ಬಿಲ್ಡಿಂಗ್, 1ನೇ ಮಹಡಿ, 199, 11ನೇ ಕ್ರಾಸ್ ಹತ್ತಿರ, ಸಂಪಿಗೆ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-3.
3) ಸಿದ್ದಮ್ಮ ಕೋಂ. ರಾಜು, ನಂ.33, ಆಂಜನೇಯ ದೇವಸ್ಥಾನ ಬೀದಿ, ಸಾಣೆ ಗೊರವನಹಳ್ಳಿ, ಬೆಂಗಳೂರು-79.

**ಪ್ರಕಟಣೆ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 15.1.2002 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಅಬ್ದುಲ್ ಜಬ್ಬಾರ್, ವಯಸ್ಸು ಸುಮಾರು 36 ವರ್ಷ ಅವರು ಮೇಲೆ ವಿಳಾಸಿಸಿರುವ ಮೂರನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1,2,3ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 15 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ

ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಹೆಚ್.ಕೆ. ಷಣ್ಮುಖಪ್ಪ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-6, ಬೆಂಗಳೂರು.

ಪಿ.ಆರ್. 1374

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-6, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 29

**ಪ್ರಕರಣದ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-28/2003, ದಿನಾಂಕ: 12ನೇ ಡಿಸೆಂಬರ್ 2003**

**ಅರ್ಜಿದಾರರು**

1) ಗಂಗಮ್ಮ, 23 ವರ್ಷ 2) ನಂಜುಂಡ, 5 ವರ್ಷ
3) ನಿಖಿಲ್, 2 ವರ್ಷ 4) ಕರಿಯಪ್ಪ, 55 ವರ್ಷ
5) ಜಯಮ್ಮ, 50 ವರ್ಷ.

**ವಾಸ:** C/o ರಾಜಣ್ಣ, ನಂ.1781, 40ನೇ 'ಎ' ಕ್ರಾಸ್, 26ನೇ 'ಹೆಚ್' ಮೈನ್ ರೋಡ್, 9ನೇ ಬ್ಲಾಕ್, ಜಯನಗರ, ಬೆಂಗಳೂರು-79.

**ವಿರುದ್ಧ**

**ಪ್ರತಿವಾದಿಗಳು**

1) ಎಂ. ರಾಜಣ್ಣ ಬಿನ್ ಮೂಡ್ಲಪ್ಪ, ನಂ.108, 1ನೇ ಮಹಡಿ, 2ನೇ ಕ್ರಾಸ್, ಎಂಇಐ ಕಾಲೋನಿ, ಲಗ್ಗೆರೆ ಮುಖ್ಯ ರಸ್ತೆ, ಬೆಂಗಳೂರು.
2) ದಿ ಓರಿಯಂಟಲ್ ಇನ್ಸುರೆನ್ಸ್ ಕಂ. ಲಿ., ನಾಗಪ್ರಭಾ ಛೇಂಬರ್ಸ್, ಡಿ.ಓ.ನಂ.10, ನಂ.213-217, 2ನೇ ಮಹಡಿ, 3ನೇ ಮೈನ್, 4ನೇ ಮೈನ್,
3) ಚಾಮರಾಜಪೇಟೆ, ಬೆಂಗಳೂರು-18.

### ಪ್ರಕಟಣೆ

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 17.11.2003 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಕುಮಾರ್, ವಯಸ್ಸು ಸುಮಾರು 30 ವರ್ಷ ಅವರು ಮೇಲೆ ವಿಳಾಸಿಸಿರುವ ಒಂದನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಹೆಚ್.ಕೆ. ಷಣ್ಮುಖಪ್ಪ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-6, ಬೆಂಗಳೂರು.

ಪಿ.ಆರ್. 1375

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-6, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 29

**ಪ್ರಕರಣದ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:ಸಿಆರ್-5/2003, ದಿನಾಂಕ: 12ನೇ ಡಿಸೆಂಬರ್ 2003**

**ಅರ್ಜಿದಾರರು**

1) ಎನ್. ಧನಲಕ್ಷ್ಮಿ, 25 ವರ್ಷ
2) ಕೆ. ವಿಶಾಲ್ ಕುಮಾರ್, 7 ವರ್ಷ
3) ಕೆ. ಮೇಘನ, 6 ವರ್ಷ

**ವಾಸ:** ನಂ.435, 16ನೇ ಮುಖ್ಯ ರಸ್ತೆ, 4ನೇ 'ಟಿ' ಬ್ಲಾಕ್ ಜಯನಗರ, ಬೆಂಗಳೂರು-41.

**ವಿರುದ್ಧ**

**ಪ್ರತಿವಾದಿಗಳು**

1) ಮೆ: ಸುಂದರಂ ಇಂಡಸ್ಟ್ರೀಸ್ ಲಿಮಿಟೆಡ್, ಪ್ಲಾಟ್ ನಂ.51, 2ನೇ ಫೇಸ್, ಪೀಣ್ಯ ಇಂಡಸ್ಟ್ರೀಯಲ್ ಏರಿಯಾ, ಬೆಂಗಳೂರು-58.
2) ಯುನೈಟೆಡ್ ಇಂಡಿಯಾ ಇನ್ಸುರೆನ್ಸ್ ಕಂಪನಿ, 10:4, ಮಿತ್ರ ಟವರ್ಸ್, ಕಸ್ತುರಬಾ ರಸ್ತೆ, ಬೆಂಗಳೂರು-1.

### ಪ್ರಕಟಣೆ

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 26.2.2003 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಆರ್. ಕೇಶಮೂರ್ತಿ, ವಯಸ್ಸು ಸುಮಾರು 30 ವರ್ಷ ಅವರು ಮೇಲೆ ವಿಳಾಸಿಸಿರುವ ಒಂದನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಕೇಳಿಕೊಳ್ಳುವುದಾದರೆ ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

**ಹೆಚ್.ಕೆ. ಷಣ್ಮುಖಪ್ಪ**

ಪಿ.ಆರ್. 1376

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಉಪ ವಿಭಾಗ-6, ಬೆಂಗಳೂರು.

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮಿಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್.ಸಂಖ್ಯೆ: 827/2002-2003, ದಿನಾಂಕ: 18ನೇ ನವೆಂಬರ್ 2003**

**ಅಬಕಾರಿ ಉಪ ನಿರೀಕ್ಷಕರು 1, ಚಿಕ್ಕಮಗಳೂರು ಉಪವಿಭಾಗ ಇವರ ಪ್ರವವ ಸಂಖ್ಯೆ:90/2002-03 ದಿ: 6/04/2003**

**ಉಪಸ್ಥಿತರು**

**ಕೆ. ಭೀಮಪ್ಪ**

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮಿಷನರ್ ಆಫ್ ಎಕ್ಸೈಜ್ (ಪ್ರಭಾರ) ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು**

| **ಫಿರ್ಯಾದುದಾರರು** | **ವಿರುದ್ಧ** | **ಆಪಾದಿತರು** |
|---|---|---|
| ಅಬಕಾರಿ ಉಪ ನಿರೀಕ್ಷಕರು 1<br>ಚಿಕ್ಕಮಗಳೂರು ಉಪ ವಿಭಾಗ | | ಅಣ್ಣೇಗೌಡ ಬಿನ್ ನಂಜೇಗೌಡ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 6.4.2003 ರಂದು ಅಬಕಾರಿ ಉಪ ನಿರೀಕ್ಷಕರು 1, ಚಿಕ್ಕಮಗಳೂರು ಉಪ ವಿಭಾಗ, ಇವರು ಬಜಾಜ್ ಸ್ಕೂಟರ್ ಸಂಖ್ಯೆ: ಕೆಎ 06 ಇ 1090 ಅನ್ನು ಅಕ್ರಮ ಮದ್ಯ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿ ವಾಹನವನ್ನು ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 5.400 ಲೀ. ದೇಶಿಯ ಮದ್ಯವಿದ್ದು, ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿ ಅಣ್ಣೇಗೌಡ ಬಿನ್ ನಂಜೇಗೌಡ ಇವರು ಸಂಬಂಧಪಟ್ಟ ದಾಖಲಾತಿಗಳನ್ನು ಹಾಜರುಪಡಿಸದೇ ಇದ್ದುದರಿಂದ, ತೆರಿಗೆ ರಹಿತವಾದುದೆಂದು ದೃಢಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಮದ್ಯವನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಪ್ರ.ವ.ವ. ಸಂಖ್ಯೆ: 90/2002-03 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ದೇಶಿಯ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ, ಆಪಾದಿತರಿಗೆ ಕಲಂ, 43(ಬಿ) ಅಡಿಯಲ್ಲಿ ನೋಟೀಸ್ ನೀಡಲು ಕ್ರಮ ಕೈಗೊಳ್ಳಲಾಯಿತು.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ತುಮಕೂರು ಇವರಿಂದ ಪಡೆಯಲಾದ ಬಿ. ವರದಿ ಆಧಾರದ ಮೇಲೆ ವಾಹನದ ಮಾಲೀಕರಾದ ಶ್ರೀ ವಿ.ಎನ್. ತೋಂಟಾದಾರ್ಯ, ಹೆಡ್ ಕ್ಯಾಷಿಯರ್, ಎಸ್.ಬಿ.ಎಂ. ಬ್ಯಾಂಕ್, ತಿಪಟೂರು, ತುಮಕೂರು ಜಿಲ್ಲೆ. ಇವರಿಗೆ ಕಲಂ.43(ಬಿ) ನೋಟೀಸ್ ಅನ್ನು ನೋಂದಾಯಿತ ಅಂಚೆ ಮೂಲಕ ಕಳುಹಿಸಿದ್ದು, ಸದರಿಯವರು ದಿನಾಂಕ: 11.07.2003 ರಂದು ವಾಹನದ ಮಾಲೀಕರಾದ ಶ್ರೀ ವಿ.ಎನ್. ತೊಂಟಾದಾರ್ಯ, ಎಸ್.ಬಿ.ಎಂ. ಬ್ಯಾಂಕಿನ ನಿವೃತ್ತಿ ಹೆಡ್ ಕ್ಯಾಷಿಯರ್, ಪಂಚಾಕ್ಷರ ಕೃಪ, 2ನೇ ಕ್ರಾಸ್, ಸಿ.ಎನ್.ಐ. ಲೇಔಟ್, ಗೂಡ್‌ಶೆಡ್ ರಸ್ತೆ, ತುಮಕೂರು, ಇವರು ನೋಟರಿ ಮೂಲಕ ಪ್ರಮಾಣ ಪತ್ರ ಸಲ್ಲಿಸುತ್ತಾ, ಪ್ರಮಾಣ ಪತ್ರದಲ್ಲಿ ಜಫ್ತಾಗಿರುವ ಸದರಿ ವಾಹನವು ಸುಮಾರು ಎಂಟು ವರ್ಷಗಳ ಹಿಂದೆ ಬಾಣಾವರದ ವ್ಯಕ್ತಿಯೊಬ್ಬರಿಗೆ ಮಾರಾಟ ಮಾಡಿ ದಾಖಲೆಗಳಿಗೆ ಸಹಿ ಮಾಡಿ ಕೊಟ್ಟಿದ್ದು, ಆದರೆ ಸದರಿಯವರು ತಮ್ಮ ಹೆಸರಿಗೆ ವಾಹನವನ್ನು ನೋಂದಾಯಿಸಿಕೊಂಡಿರುವ ಬಗ್ಗೆ ತನಗೆ ಯಾವುದೇ ಮಾಹಿತಿ ಇರುವುದಿಲ್ಲವಾದ್ದರಿಂದ ಸದರಿ ವಾಹನಕ್ಕೂ ತನಗೂ ಯಾವುದೇ ಸಂಬಂಧವಿರುವುದಿಲ್ಲವೆಂದು ತಿಳಿಸಿ, ಸದರಿ ವಾಹನವನ್ನು ಅಕ್ರಮವಾಗಿ ತೆರಿಗೆ ರಹಿತ ಭಾರತೀಯ ಮದ್ಯ ಸಾಗಿಸಲು ಉಪಯೋಗಿಸಿದ್ದು ಕಂಡುಬಂದಿದ್ದಲ್ಲಿ ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಅಭ್ಯಂತರವೇನೂ ಇರುವುದಿಲ್ಲವೆಂದು ತಿಳಿಸಿರುತ್ತಾರೆ.

ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಹಾಗೂ ವಾಹನದ ಮಾಲೀಕರ ಪ್ರಮಾಣ ಪತ್ರದ ಅಂಶಗಳನ್ನು ಪರಿಶೀಲಿಸುತ್ತಾ ಮೊಕದ್ದಮೆ ದಾಖಲಾಗಿ ಏಳು ತಿಂಗಳಿಗೂ ಮೇಲ್ಪಟ್ಟಿದ್ದು, ವಶಪಡಿಸಿಕೊಂಡ ವಾಹನದ ಮುಟ್ಟುಗೋಲಿನ ನಡುವಳಿಗಳು ಇನ್ನು ತನಿಖಾ ಹಂತದಲ್ಲಿದ್ದು, ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರಿತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿ ಮತ್ತು ವಾಹನದ ಮಾಲೀಕರ ಪ್ರಮಾಣ ಪತ್ರದ ಅಂಶಗಳನ್ನು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43(ಸಿ) ಅಡಿಯಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**"ಆದೇಶ"**

ಕೆ. ಭೀಮಪ್ಪ, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮಿಷನರ್ ಆಫ್ ಎಕ್ಸೈಜ್ (ಪ್ರಭಾರ), ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು. ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕಲಂ.43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ: ಕೆಎ. 06 ಇ. 1090 (ಬಜಾಜ್ ಸ್ಕೂಟರ್) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ವಶಪಡಿಸಿಕೊಂಡ 5.400 ಲೀಟರ್ ಮದ್ಯವಿದ್ದು, ಸದರಿ ಮದ್ಯವನ್ನು ರಾಸಾಯನಿಕ ಪರೀಕ್ಷೆಗೆ ತೆಗೆದಿರುವುದರಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟು ಗೋಲು ಹಾಕಿಕೊಂಡು ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ 18ನೇ ನವೆಂಬರ್ 2003 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಗಿತ್ತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮಿಷನರ್ ಆಫ್ ಎಕ್ಸೈಜ್ (ಪ್ರಭಾರ),
ಪಿ.ಆರ್. 1377 ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

**ಅಧಿಕಾರಿಯುತ ಅಧಿಕಾರಿ ಹಾಗೂ ಅಬ್ಕಾರಿ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು**

**ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್.ಸಂಖ್ಯೆ: 496/2002-2003, ದಿನಾಂಕ: 19ನೇ ನವೆಂಬರ್ 2003**

**ಅಬಕಾರಿ ನಿರೀಕ್ಷಕರು, ಕಡೂರು ವಲಯ ಇವರ ಪ್ರ.ವ.ವ. ಸಂಖ್ಯೆ:5/2002-03 ದಿನಾಂಕ: 31/10/2002**

**ಉಪಸ್ಥಿತರು**

**ಕೆ.ಸಿ. ಹರಿದಾಸ್**

**ಅಧಿಕಾರಿಯುತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು**

| **ಫಿರ್ಯಾದುದಾರರು** | **ವಿರುದ್ಧ** | **ಆಪಾದಿತರು** |
|---|---|---|
| ಅಬಕಾರಿ ನಿರೀಕ್ಷಕರು, | | ಆರೋಪಿಯ ವಿಳಾಸ ತಿಳಿದು ಬಂದಿರುವುದಿಲ್ಲ. |
| ಕಡೂರು ವಲಯ | | **ಅರ್ಜಿದಾರರು** |
| | | ಶ್ರೀ ಕೆ. ಚಿದಾನಂದ ಬಿನ್ ಎಸ್. ಕಲ್ಲಪ್ಪ |
| | | ಶ್ರೀ ಕಲ್ಲೇಶ್ವರ ಇಂಡಸ್ಟ್ರೀಸ್, ಇಂಡಸ್ಟ್ರಿಯಲ್ ಎಸ್ಟೇಟ್, ಹೊಸದುರ್ಗ. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 31.10.2002 ರಂದು ಅಬಕಾರಿ ನಿರೀಕ್ಷಕರು, ಕಡೂರು ವಲಯ. ಇವರು ವಾಹನ ಸಂಖ್ಯೆ: ಕೆಎ. 16, ಜೆ 4048 (ಸುಜುಕಿ ಮ್ಯಾಕ್ಸ್ 100) ಅನ್ನು ಅಕ್ರಮ ಮದ್ಯ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ ವಾಹನದಲ್ಲಿ 15.750 ಲೀಟರ್ ಮದ್ಯವಿದ್ದು, ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದ ಚಾಲಕರು ವಾಹನವನ್ನು ಸ್ಥಳದಲ್ಲಿ ಬಿಟ್ಟು ಓಡಿ ಹೋಗಿರುವುದರಿಂದ ವಿಳಾಸ ತಿಳಿದು ಬಂದಿರುವುದಿಲ್ಲ. ಸದರಿ ವಾಹನದಲ್ಲಿ ಸಂಬಂಧಪಟ್ಟ ಅಧಿಕೃತ ರಹದಾರಿ ಪತ್ರಗಳನ್ನಾಗಲೀ ಅಥವಾ ದಾಖಲಾತಿ ಪತ್ರಗಳನ್ನಾಗಲೀ ಹಾಜರುಪಡಿಸಲು ಸ್ಥಳದಲ್ಲಿ ಯಾರೂ ಇಲ್ಲದೇ ಇದ್ದದರಿಂದ ಸಾಗಾಣಿಕೆಯಾಗುತ್ತಿರುವ ಮದ್ಯವು, ತೆರಿಗೆ ರಹಿತವಾದುದೆಂದು ದೃಢಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಮದ್ಯವನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತುಪಡಿಸಿಕೊಂಡು ಪ್ರ.ವ.ವ. ಸಂಖ್ಯೆ:5/2002-03 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ, ತನಿಖೆ ಮುಂದುವರೆಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ದೇಶಿಯ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ ಪತ್ರ ಬರೆಯಲಾಗಿತ್ತು.

ದಿನಾಂಕ: 12.3.2003 ರಂದು ಶ್ರೀ ಕೆ. ಚಿದಾನಂದ ಬಿನ್ ಎಸ್. ಕಲ್ಲಪ್ಪ, ಶ್ರೀ ಕಲ್ಲೇಶ್ವರ ಇಂಡಸ್ಟ್ರೀಸ್, ಇಂಡಸ್ಟ್ರಿಯಲ್ ಎಸ್ಟೇಟ್, ಹೊಸದುರ್ಗ ಇವರು ವಾಹನದ ಮಾಲೀಕರೆಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿತ್ರದುರ್ಗ ಜಿಲ್ಲೆ. ಇವರು ಅಬಕಾರಿ ನಿರೀಕ್ಷಕರು, ಕಡೂರು ವಲಯ ಇವರಿಗೆ ವಾಹನದ "ಬಿ" ವರದಿಯನ್ನು ನೀಡಿರುತ್ತಾರೆ. ಸದರಿ ಅಬಕಾರಿ ನಿರೀಕ್ಷಕರು "ಬಿ" ವರದಿಯನ್ನು ದಿನಾಂಕ: 15.3.2003 ರಂದು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ. ಹಾಗೂ ಮೋಟಾರು ವಾಹನ ನಿರೀಕ್ಷಕರು, ಪ್ರಾದೇಶಿಕ ಸಾರಿಗೆ ಕಛೇರಿ, ಚಿಕ್ಕಮಗಳೂರು ಇವರು ದಿನಾಂಕ: 25.8.2003 ರಂದು ವಾಹನಕ್ಕೆ ರೂ.15,500/- (ಹದಿನೈದು ಸಾವಿರದ ಐದು ನೂರು ರೂಪಾಯಿಗಳು ಮಾತ್ರ) ಗಳ ಬೆಲೆ ನಿಗದಿ ಪಡಿಸಿರುತ್ತಾರೆ.

ದಿನಾಂಕ: 30.4.2003 ರಂದು ವಾಹನದ ಮಾಲೀಕರಾದ ಶ್ರೀ ಕೆ. ಚಿದಾನಂದ ಬಿನ್ ಎಸ್. ಕಲ್ಲಪ್ಪ, ಶ್ರೀ ಕಲ್ಲೇಶ್ವರ ಇಂಡಸ್ಟ್ರೀಸ್, ಇಂಡಸ್ಟ್ರಿಯಲ್ ಎಸ್ಟೇಟ್, ಹೊಸದುರ್ಗ. ಇವರಿಗೆ 1965ರ ಕಲಂ.43(ಬಿ) ಅಡಿಯಲ್ಲಿ ನೋಟೀಸ್ ಅನ್ನು ನೋಂದಾಯಿತ ಅಂಚೆ ಮೂಲಕ ಕಳುಹಿಸಿದ್ದು, ಸದರಿ ನೋಟೀಸ್ ಈ ಪ್ರಾಧಿಕಾರಕ್ಕೆ ಷರಾದೊಂದಿಗೆ ದಿನಾಂಕ: 17.5.2003 ರಂದು ಈ ಮರಳಿ

ಬಂದಿರುತ್ತದೆ. ಹಾಗೂ ದಿನಾಂಕ: 6.8.2003ರ ನೋಟೀಸ್ ಅನ್ನು ಅಬಕಾರಿ ನಿರೀಕ್ಷಕರು, ಕಡೂರು ವಲಯ ಇವರು ದಿನಾಂಕ: 23.8.2003 ರಂದು ಖುದ್ದು ಜಾರಿ ಮಾಡಿ ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ.

ದಿನಾಂಕ: 28.8.2003 ರಂದು ಶ್ರೀ ಕೆ. ಚಿದಾನಂದ ಬಿನ್ ಎಸ್. ಕಲ್ಲಪ್ಪ, ಶ್ರೀ ಕಲ್ಲೇಶ್ವರ ಇಂಡಸ್ಟ್ರೀಸ್, ಇಂಡಸ್ಟ್ರಿಯಲ್ ಎಸ್ಟೇಟ್, ಹೊಸದುರ್ಗ ಇವರು ಈ ಪ್ರಾಧಿಕಾರಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ಸದರಿ ಮೊಕದ್ದಮೆಯಲ್ಲಿನ ಆರೋಪವನ್ನು ಒಪ್ಪಿಕೊಂಡು, ನನ್ನ ಸ್ನೇಹಿತನಾದ ಮಹಂತೇಶ್ ಇವರು ನನ್ನ ವಾಹನವನ್ನು ನನ್ನ ಗಮನಕ್ಕೆ ಬಾರದೇ ತೆಗೆದುಕೊಂಡು ಹೋಗಿರುತ್ತಾರೆ. ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡಿರುವ ಮದ್ಯಕ್ಕೂ ತಮಗೂ ಯಾವುದೇ ಸಂಬಂಧವಿರುವುದಿಲ್ಲವಾದ್ದರಿಂದ ಮೊಕದ್ದಮೆಯನ್ನು ಇಲಾಖಾ ಮೂಲಕ ಇತ್ಯರ್ಥಗೊಳಿಸಿ ಕೊಡಬೇಕೆಂದು ಕೋರಿ ಈ ಸಂಬಂಧ ವಿಧಿಸುವ ದಂಡದ ಹಣ ಮತ್ತು ವಾಹನಕ್ಕೆ ನಿಗದಿ ಪಡಿಸುವ ಬೆಲೆಯನ್ನು ಸರ್ಕಾರಕ್ಕೆ ಸಂದಾಯ ಮಾಡಲು ಬದ್ಧರಿರುವುದಾಗಿ ತಿಳಿಸಿರುತ್ತಾರೆ.

ಮೊಕದ್ದಮೆಗೆ ಸಂಬಂಧಿಸಿದ ದಾಖಲೆಗಳನ್ನು ಹಾಗೂ ಅರ್ಜಿದಾರರ ಮನವಿಯ ಅಂಶಗಳನ್ನು ಪರಿಶೀಲಿಸಿದೆ. ಹಾಗೂ ವಶಪಡಿಸಿಕೊಂಡ ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲಾಗಿದ್ದು, ವಾಹನದ ಮುಟ್ಟುಗೋಲಿನ ನಡುವಳಿಗಳು ಇನ್ನು ತನಿಖಾ ಹಂತದಲ್ಲಿದ್ದು, ಮುಟ್ಟುಗೋಲಿನ ನಡುವಳಿಗಳು ಪೂರ್ಣಗೊಳ್ಳುವಲ್ಲಿ ಸಾಕಷ್ಟು ಕಾಲಾವಕಾಶ ಬೇಕಾಗುವುದರಿಂದ, ವಶಪಡಿಸಿಕೊಂಡ ವಾಹನವನ್ನು ಇಲಾಖೆಯ ವಶದಲ್ಲಿ ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರಿತ್ಯಗಳಿಗನುಗುಣವಾಗಿ ವಾಹನದ ಮೌಲ್ಯವು ಇಳಿಮುಖಗೊಂಡು ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿ ಮತ್ತು ಅರ್ಜಿದಾರರ ಮನವಿಯ ಅಂಶಗಳನ್ನು ಪರಿಗಣಿಸಿ ಕರ್ನಾಟಕ ಅಬಕಾರಿ ಕಾಯ್ದೆ ಕಲಂ.43(ಎ) ಅಡಿಯಲ್ಲಿ ಪ್ರಾಧಿಕಾರವು ಜರುಗಿಸುತ್ತಿದ್ದ ವಾಹನದ ಮುಟ್ಟುಗೋಲಿನ ನಡುವಳಿಗಳನ್ನು ಕೈಬಿಟ್ಟು ಕರ್ನಾಟಕ ಅಬಕಾರಿ ಕಾಯ್ದೆ ಕಲಂ.45ರ ಅಡಿಯಲ್ಲಿ ಇತ್ಯರ್ಥಗೊಳಿಸುವುದು ಸೂಕ್ತವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ದಿನಾಂಕ: 22.10.2003 ರಂದು ಅರ್ಜಿದಾರರ ಮನವಿಯನ್ನು ಪುರಸ್ಕರಿಸಿ, ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ: ಕೆಎ. 16, ಜೆ 4048 (ಸುಜುಕಿ ಮ್ಯಾಕ್ಸ್ 100)ರ ಮೇಲಿನ ಮೊಕದ್ದಮೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.45ರ ಅಡಿಯಲ್ಲಿ ಇತ್ಯರ್ಥಗೊಳಿಸಲು ಕ್ರಮತೆಗೆದುಕೊಂಡಿದ್ದು, ವಾಹನಕ್ಕೆ 15,500/- (ಹದಿನೈದು ಸಾವಿರದ ಐದು ನೂರು ರೂಪಾಯಿಗಳು ಮಾತ್ರ) ಗಳ ಬೆಲೆ ನಿಗದಿಪಡಿಸಿ ರೂ.5.000/- (ಐದು ಸಾವಿರ ರೂಪಾಯಿಗಳು ಮಾತ್ರ) ಗಳ ದಂಡ ವಿಧಿಸಿ ಇಲಾಖಾ ಮೂಲಕ ಇತ್ಯರ್ಥಗೊಳಿಸಿದೆ.

ಅರ್ಜಿದಾರರು ವಾಹನಕ್ಕೆ ನಿಗದಿಪಡಿಸಿದ ಬೆಲೆ ಮತ್ತು ವಿಧಿಸಿದ ದಂಡದ ಹಣವನ್ನು ಸರ್ಕಾರಕ್ಕೆ ಸಂದಾಯ ಮಾಡಿದ ನಂತರ ವಾಹನವನ್ನು ವಾಹನದ ಮಾಲೀಕರ ಸಂಪೂರ್ಣ ಸುಪರ್ಧಿಗೆ ಬಿಡುಗಡೆಗೊಳಿಸಲು ಆದೇಶಿಸಿದೆ.

ಸದರಿ ಆದೇಶದಲ್ಲಿ ಅರ್ಜಿದಾರರಿಗೆ ವಾಹನಕ್ಕೆ ನಿಗದಿಪಡಿಸಿದ ಬೆಲೆ ಹಾಗೂ ವಿಧಿಸಿದ ದಂಡದ ಹಣವನ್ನು 15 ದಿನದೊಳಗಾಗಿ ಸರ್ಕಾರಕ್ಕೆ ಸಂದಾಯ ಮಾಡಿ ವಾಹನವನ್ನು ತಮ್ಮ ಸಂಪೂರ್ಣ ಸುಪರ್ಧಿಗೆ ಪಡೆಯದೇ ಇದ್ದ ಪಕ್ಷದಲ್ಲಿ ಸದರಿ ವಾಹನದ ಮೇಲೆ ಅರ್ಜಿದಾರರಿಗೆ ಯಾವುದೇ ಆಸಕ್ತಿ ಇಲ್ಲವೆಂದು ಪರಿಗಣಿಸಿ, ಯಾವುದೇ ನೋಟೀಸ್ ವಗೈರೆ ನೀಡದೇ ಮೊಕದ್ದಮೆಯಲ್ಲಿ ಏಕಪಕ್ಷೀಯ ನಿರ್ಣಯ ಕೈಗೊಂಡು ವಾಹನವನ್ನು ಕಲಂ.43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದೆಂದು ತಿಳಿಯಪಡಿಸಲಾಗಿದೆ.

ಇತ್ಯರ್ಥಪಡಿಸಿದ ಆದೇಶದ ಪ್ರತಿಯನ್ನು ಅರ್ಜಿದಾರರಿಗೆ ದಿನಾಂಕ: 29.10.2003 ರಂದು ನೋಂದಾಯಿತ ಅಂಚೆ ಮೂಲಕ ನೀಡಿದ್ದು, ಸದರಿಯವರಿಗೆ ಜಾರಿಯಾಗಿದ್ದು, ಸ್ವೀಕೃತಿಯೊಂದಿಗೆ ದಿನಾಂಕ: 3/11/2003 ರಂದು ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ. ಅರ್ಜಿದಾರರು ಸದರಿ ಆದೇಶದ ಪ್ರತಿಯನ್ನು ಪಡೆದ ನಂತರದಲ್ಲಿ ವಾಹನಕ್ಕೆ ವಿಧಿಸಿದ ದಂಡದ ಹಣ ಮತ್ತು ವಾಹನದ ಬೆಲೆಯನ್ನು ಪಾವತಿಸಿರುವುದಿಲ್ಲ ಹಾಗೂ ಪ್ರಾಧಿಕಾರದ ಮುಂದೆ ಹಾಜರಾಗದೇ ಯಾವುದೇ ಸಮಜಾಯಿಷಿ ನೀಡಿರುವುದಿಲ್ಲ.

ಆದ್ದುದರಿಂದ ಈ ಪ್ರಾಧಿಕಾರವು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.45ರ ಅಡಿಯಲ್ಲಿ ಇತ್ಯರ್ಥಗೊಳಿಸಿರುವ ಆದೇಶವನ್ನು ಕೈಬಿಟ್ಟು ಏಕಪಕ್ಷೀಯ ನಿರ್ಣಯ ಕೈಗೊಂಡು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಸಿ) ಅಡಿಯಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಕೆಳಕಂಡಂತೆ ಆದೇಶಿಸಿದೆ.

**"ಆದೇಶ"**

ಕೆ.ಸಿ. ಹರಿದಾಸ್, ಅಧಿಕಾರಿಯುತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು. ಆದ ನಾನು, ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ ಕಲಂ.43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ: ಕೆಎ. 16 ಜೆ. 4048 (ಸುಜುಕಿ ಮ್ಯಾಕ್ಸ್ 100) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 19ನೇ ನವೆಂಬರ್ 2003 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ಕೊಟ್ಟು ಕಂಪ್ಯೂಟರ್‌ನಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಗಿತ್ತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

ಅಧಿಕಾರಿಯುತ ಅಧಿಕಾರಿ ಹಾಗೂ ಅಬ್ಕಾರಿ ಅಧೀಕ್ಷಕರು,

ಪಿ.ಆರ್. 1378 ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

**IN THE COURT OF THE 7TH ADDL. CHIEF METROPOLITAN MAGISTRATE, BANGALORE CITY**
**NOTIFICATION No. GI 2905/03, Dated: 12th December 2003**

It is notified for information of the general public that the following vehicle is with the custody of Rajagopalanagara Police Station as unclaimed. Hence the public who are interested may claim the vehicles with the required information's with in 6 months from the date of this notification, failing which the vehicle will be forfeited to state will be sold in the public action.

| | Details of Vehicles | Cimes No. | P.F. No. |
|---|---|---|---|
| 1) | Kinetic Honda,<br>No.Nil, Chassis No. Nil, Engine No. 006801NIEB | 1032/2002 | No.132/2002 |
| 2) | T.V.S. XL<br>No. KA-02-EB-8991, Chassis No. A010F475709,<br>Engine No. Nil. | 524/2003 | No.77/2003 |
| 3) | T.V.S. Champ,<br>No. KA-03-R3992, Chassis No.L602F283577,<br>Engine No. L602M266072. | 1142/2003 | No.180/2003 |

VII Addl, Chief Metropolitan Magistrate,
Bangalore City.

P.R. 1379

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ**

**ಇತರೆ ದಾವಾ ನಂ. 13:01-02**

**ಅರ್ಜಿದಾರರು**

ಗ್ರಾಮಾಂತರ ಗೃಹ ನಿರ್ಮಾಣ ಸಹಕಾರ ಸಂಘ (ನಿ),
100 ಅಡಿ ರಸ್ತೆ, ವಿನೋಬನಗರ, ಶಿವಮೊಗ್ಗ.

**ಇದರ ಪರವಾಗಿ**

ಎ.ಆರ್. ಶಶಿಧರ್, ಸಮಾಪನಾಧಿಕಾರಿ, ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು, ಮುಖ್ಯ ಗುಮಾಸ್ತರು (ಸಿಸಿಸಿ), ಡಿಸಿಸಿ ಬ್ಯಾಂಕ್ (ನಿ), ಶಿವಮೊಗ್ಗ.

**ಎದುರು ಅರ್ಜಿದಾರರು**

1. ಶ್ರೀ ಎಸ್.ಟಿ. ಹಾಲಪ್ಪ ಬಿನ್ ತಿಮ್ಮಪ್ಪ, ಪ್ರಿಯದರ್ಶಿನಿ ಬಡಾವಣೆ, 30 ಅಡಿ ರಸ್ತೆ, ಶಿವಮೊಗ್ಗ.
2. ವಿ. ನರಸೇಗೌಡ ಬಿನ್ ನರಸಿಂಹಯ್ಯ, ಗಾಡಿ ಕೊಪ್ಪ, ಶಿವಮೊಗ್ಗ.
3. ಶ್ರೀಮತಿ ಮೀನಾಕ್ಷಿ ಕೋಂ ಎಸ್.ಟಿ. ಹಾಲಪ್ಪ, ಪ್ರಿಯದರ್ಶಿನಿ ಬಡಾವಣೆ, 30 ಅಡಿ ರಸ್ತೆ, ಶಿವಮೊಗ್ಗ.

(ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ಹೊರಡಿಸಿದ ತೀರ್ಪು ಪೂರ್ವ ಜಪ್ತು ಅಜ್ಞೆ)

**ಪ್ರಸ್ತಾವನೆ:**

ಅರ್ಜಿದಾರ ಸಂಘವು ಈ ನ್ಯಾಯಾಲಯದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ ಸಂಘದ ಸಮಾಪನಾಧಿಕಾರಿಗಳು ಹೂಡಿದ ದಾವೆಯಲ್ಲಿ ಆಡಳಿತಾಧಿಕಾರಿಗಳು ಪ್ರಭಾರ ವಹಿಸಿಕೊಂಡ ನಂತರ ಮೊದಲನೆಯದಾಗಿ ನಿವೇಶನ ಸಂಖ್ಯೆ:217 ಹಾಗೂ 218 ರಲ್ಲಿ ಆಡಳಿತ ಮಂಡಳಿಯ ತೀರ್ಮಾನದಂತೆ ಈ ನಿವೇಶನಗಳ ಆಸ್ತಿಯ ಮುಖಬೆಲೆಯನ್ನು ನಿಗದಿಪಡಿಸಿಕೊಳ್ಳದೇ ಮತ್ತು ಆಡಳಿತ ಮಂಡಳಿಗೆ ಮಾಹಿತಿಯನ್ನು ನೀಡದೇ ಎದುರಿ 1ರ ಪತ್ನಿಯಾದ ಎದುರಿ 3 ಇವರಿಗೆ ಕ್ರಯಪತ್ರ ನೋಂದಾಯಿಸಿ ಕೊಡುವುದರ ಮೂಲಕ ಅಗ್ಗದ ದರದಲ್ಲಿ ನಿವೇಶನ ಮಾರಾಟ ಮಾಡಿ ನಷ್ಟ ಉಂಟು ಮಾಡಿರುತ್ತಾರೆ. ಹಾಗೂ ಎರಡನೆಯದಾಗಿ ಕ್ರಯಪತ್ರದಲ್ಲಿ ಪಡೆದಿದ್ದೇವೆ ಎನ್ನಲಾದ ಕ್ರಯದ ಪೂರ್ಣ ಹಣವನ್ನು ಅರ್ಜಿದಾರ ಸಂಘಕ್ಕೆ ಜಮಾ ಪಡೆಯದೇ ದುರುಪಯೋಗ ಮಾಡಿರುತ್ತಾರೆಂದು ಆಪಾದನೆಗೆ ಒಳಗಾದ 1 ಮತ್ತು 2ನೇ ಎದುರು ಅರ್ಜಿದಾರರಿಂದ ಮೊದಲನೆಯದರಲ್ಲಿ ರೂ.1,00,000-00 ಹಾಗೂ ಎರಡನೆಯದರಲ್ಲಿ ಎದುರು 1, 2 ಮತ್ತು 3 ರವರಿಂದ ರೂ.1,00,000-00 ಹೀಗೆ ಒಟ್ಟು ರೂ.2,00,000-00 ಗಳ ಮೊತ್ತವನ್ನು ಬಡ್ಡಿ ಸಹಿತ ವಸೂಲಿಗಾಗಿ ಆದೇಶ ನೀಡಲು ಪ್ರಾರ್ಥಿಸಿರುತ್ತಾರೆ. ಈ ಸಂಬಂಧವಾಗಿ ಮಧ್ಯಂತರ ಅರ್ಜಿ ನಂ.3 ಅನ್ನು ಸಲ್ಲಿಸಿ, ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತು ಆಜ್ಞೆಗಾಗಿ ಕೋರಿದ್ದಾರೆ. ಅರ್ಜಿದಾರರು ವ್ಯಾಜ್ಯದಲ್ಲಿನ ಕ್ಲೈಮ್ ಮೊತ್ತ ಹೆಚ್ಚಿನ ಮೊತ್ತವಾಗಿದ್ದು, ಇದಕ್ಕೆ ತನ್ನದಾದ ಮೌಲ್ಯದ ಆಸ್ತಿಯನ್ನು ನ್ಯಾಯಾಲಯದ ವ್ಯಾಪ್ತಿಗೆ ಒಳಪಡಿಸುವುದು ಸೂಕ್ತವೆಂದು ತಿಳಿದು, ಎದುರು ಅರ್ಜಿದಾರರಾದ ಶ್ರೀ ವಿ. ನರಸೇಗೌಡ ಬಿನ್ ನರಸಿಂಹಯ್ಯ, ಗಾಡಿಕೊಪ್ಪ, ಶಿವಮೊಗ್ಗ ಇವರಿಗೆ ಸೇರಿರತಕ್ಕಂತಹ ಸ್ಥಿರಾಸ್ತಿಯನ್ನು ದಾವೆಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಭಾರೆ ಮಾಡುವ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಬೇಕೆಂದು ಕೋರಿದ್ದಾರೆ. ಈ ಕೋರಿಕೆ ಯುಕ್ತವಾಗಿದೆಯೆಂದು ಸ್ವಂತಃ ಈ ನ್ಯಾಯಾಲಯಕ್ಕೆ ಮನವರಿಕೆಯಾಗಿದ್ದು, ಈ ಕೆಳಕಂಡ ಷರತ್ತು ಪೂರ್ವ ಜಪ್ತು ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಕ್ರ: ಸನಿಶಿ24:ಎಬಿಎನ್:ಕಲಂ 103:03-04/1359, ದಿನಾಂಕ: 15ನೇ ಡಿಸೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ಉಪವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರಾದ ಶ್ರೀ ಎ.ಎಸ್. ಜಯಪ್ಪ, ಆದ ನಾನು ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಕಾಯ್ದೆ ಕಲಂ 103 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಈ ಆದೇಶದೊಂದಿಗೆ ಇರುವ ಅನುಸೂಚಿ (ಷೆಡ್ಯೂಲ್) ಯಲ್ಲಿ ಕಾಣಿಸಿರುವ ಸ್ಥಿರ ಸ್ವತ್ತುಗಳನ್ನು ಈ ದಾವೆಯ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವಕ ಜಪ್ತುಗೊಳಿಸಲಾಗಿದೆಯೆಂದು ಆದೇಶಿಸಿರುತ್ತೇನೆ.

ಅಲ್ಲದೇ ಎದುರು ಅರ್ಜಿದಾರರುಗಳು ತಮ್ಮ ಆಸ್ತಿಯನ್ನು ಷರತ್ತು ಪೂರ್ವಕ ಜಪ್ತು ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತುಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆ (ಸೆಕ್ಯೂರಿಟಿ) ಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ), ಶಿವಮೊಗ್ಗ ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ರಶೀತಿ ಅಥವಾ ಚಲನ್ನಿನ ಪ್ರತಿಯನ್ನು ದಿನಾಂಕ: 14.1.2004 ರೊಳಗೆ ಕೆಳಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತು ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಷರತ್ತು ಪೂರೈಸುವುದಕ್ಕೆ ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಲಾಗುವುದು ಎಂದು ತಿಳಿಯತಕ್ಕದ್ದು.

ಈ ಆದೇಶಕ್ಕೆ ಅನುಸೂಚಿಯಲ್ಲಿರುವ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತು ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

**ಷರತ್ತು ಪೂರ್ವಕ ಆದೇಶಕ್ಕೆ ಒಳಗಾದ ಸ್ವತ್ತುಗಳ (ಅನುಸೂಚಿ) ಷೆಡ್ಯೂಲ್**

| ಕ್ರ. ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಗ್ರಾಮ:ತಾ: | ಸರ್ವೆ ನಂ. ಖಾತೆ ನಂ. | ವಿಸ್ತೀರ್ಣ | ತರಹ | ಚೆಕ್ಕುಬಂದಿ |
|---|---|---|---|---|---|---|
| 1) | ವಿ. ನರಸೇಗೌಡ, ಗಾಡಿಕೊಪ್ಪ. | ಶ್ರೀರಾಂಪುರ ಕಸಬಾ-1 ಹೋಬಳಿ, ಶಿವಮೊಗ್ಗ ತಾ: | 104 | 1.11ಎ | ಖುಷ್ಕಿ | |
| 2) | - ” - | - ” - | 100 | 1.29ಎ | ತರಿ | |
| 3) | - ” - | - ” - | 101 | 1.35ಎ | ತರಿ | |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ಈ ದಿನ ದಿನಾಂಕ: 15.12.2003 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

ಪಿ.ಆರ್. 1381

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳರವರಲ್ಲಿ

**ಪ್ರಕರಣ ಸಂಖ್ಯೆ: ಕಾಅಕೊ:ಕಾನಪ:ಸಿಆರ್-ಮಪ್ರ 171/2003, ದಿನಾಂಕ: 15ನೇ ಡಿಸೆಂಬರ್ 2003**

**ಪ್ರಕಟಣೆ**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಅರ್ಜಿದಾರರು:
1) ಶ್ರೀ ಅಂದಾನಯ್ಯ ತಂದೆ ಶಿವಯ್ಯ ಶಶಿ
ಸಾ: ಹೂವಿನಾಳ ತಾ: ಜಿ: ಕೊಪ್ಪಳ.
2) ಶ್ರೀಮತಿ ಗಂಗಮ್ಮ ಗಂಡ ಅಂದಾನಯ್ಯ ಶಶಿ,
ಸಾ: ಹೂವಿನಾಳ ತಾ: ಜಿ: ಕೊಪ್ಪಳ.

ಪ್ರತಿವಾದಿಗಳು:
1) ಶ್ರೀ ವಿರಪಣ್ಣ ತಂದೆ ನಿಂಗಪ್ಪ ಕುರಬುರ,
ಸಾ: ಕುಣಕೇರಿ ತಾ: ಜಿ: ಕೊಪ್ಪಳ.
2) ಡಿವಿಜಿನಲ್ ಮ್ಯಾನೇಜರ್,
ಯುನಾಯಿಟೆಡ್ ಇಂಡಿಯಾ ಇನ್ಸುರೆನ್ಸ್ ಕಂ., ಬಳ್ಳಾರಿ.

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶಿವಾನಂದಯ್ಯ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 23.6.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರಧನಕ್ಕಾಗಿ ಕೋರಿ ಮೃತ ಹೆಂಡತಿಯಾದ ಶ್ರೀ:ಶ್ರೀಮತಿ ಅಂದಾನಯ್ಯ ಹಾಗೂ ಗಂಗಮ್ಮ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಏನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿ ಕೊಳ್ಳುವುದಾದರೆ, ಅಂಥಹವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನದಲ್ಲಿ ಯಾವುದೇ ಮೊದಲು ಅದರೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಕೊಪ್ಪಳ ಜಿಲ್ಲಾ, ಕೊಪ್ಪಳ.

ಪಿ.ಆರ್. 1382

## ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಧಾರವಾಡ ಜಿಲ್ಲೆ, ಧಾರವಾಡ ಇವರ ನ್ಯಾಯಾಲಯದಲ್ಲಿ

**ಪ್ರಕರಣ ಸಂಖ್ಯೆ: 37:2002-03, ದಿನಾಂಕ: 15ನೇ ಫೆಬ್ರವರಿ 2003**

**ಫಿರ್ಯಾದುದಾರರು** — **ವಿರುದ್ಧ** — **ಆರೋಪಿಗಳು**

ಫಿರ್ಯಾದುದಾರರು: ಅಬಕಾರಿ ಸಬ್ ಇನ್ಸ್‌ಪೆಕ್ಟರ್,
ವಿಚಕ್ಷಕದಳ ಹುಬ್ಬಳ್ಳಿ.

ಆರೋಪಿಗಳು: ಇಲ್ಲಾ

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಸಬ್ ಇನ್ಸ್‌ಪೆಕ್ಟರ್, ವಿಚಕ್ಷಕದಳ, ಹುಬ್ಬಳ್ಳಿ, ಇವರು ತಮ್ಮ ಸಿಬ್ಬಂದಿ ಹಾಗೂ ಪಂಚರೊಂದಿಗೆ, ದಿನಾಂಕ: 15.02.2003 ರಂದು ಧಾರವಾಡ ಶಹರದ ಹೊರ ವಲಯದಲ್ಲಿ ಅಬಕಾರಿ ವಸ್ತುಗಳ ಕಳ್ಳ ಸಾಗಾಣಿಕೆ ಪತ್ತೆ ಹಚ್ಚಲು ಮಂಡ್ಯಾಳ

ಗ್ರಾಮದಿಂದ ತೇಗೂರ ಗ್ರಾಮಕ್ಕೆ ಹೋಗುವ ರಸ್ತೆಯ ಮಧ್ಯದಲ್ಲಿ ಇರುವ ವೀರಾಪೂರ ಕ್ರಾಸ್ ಹತ್ತಿರ ರಸ್ತೆ ಗಾವಲು ಮಾಡುತ್ತ ಸಂಶಯಿತ ವಾಹನಗಳನ್ನು ತಪಾಸಣೆ ಮಾಡುತ್ತಿದ್ದಾಗ ಬೆಳಿಗ್ಗೆ 10-30 ಗಂಟೆಯ ಸುಮಾರಿಗೆ ಮಂಡ್ಯಾಳ ಕಡೆಯಿಂದ ವೇಗವಾಗಿ ಬಂದ ಲಾರಿಯನ್ನು ಸಂಶಯದಿಂದ ನಿಲ್ಲಿಸಲು ಸೂಚನೆ ಮಾಡಿದಾಗ ಸದರಿ ವಾಹನ ಚಾಲಕನು ನಮ್ಮನ್ನು ನೋಡಿ ದೂರದಲ್ಲಿ ವಾಹನವನ್ನು ನಿಲ್ಲಿಸಿ ಕೆಳಗೆ ಇಳಿದು ಓಡಿ ಹೋದನು ಸಿಬ್ಬಂದಿಯವರು ಅವನನ್ನು ಹಿಡಿಯಲು ಪ್ರಯತ್ನಿಸಿದರು ಸಿಗಲಿಲ್ಲ. ನಂತರ ಸದರಿ ವಾಹನದ ಹತ್ತಿರ ಹೋಗಿ ವಾಹನವನ್ನು ಶೋಧಿಸಲು ಮಾನ್ಯ ನ್ಯಾಯಾಲಯದಿಂದ ವಾರೆಂಟ್ ಪಡೆಯದ್ದಕ್ಕೆ ಕಾರಣ ನೀಡುವ ವರದಿಯನ್ನು ತಯಾರಿಸಿಕೊಂಡು ಹಾಜರಿದ್ದ ಪಂಚರ ಸಮಕ್ಷಮ ಸದರಿ ವಾಹನವನ್ನು ತಪಾಸಣೆ ಮಾಡಲಾಗಿ ಅದು ಹಳೇ ಲಾರಿ ಇದ್ದು ಅದರ ನಂ: ಎಪಿಸಿ:8292 ಇದ್ದು ವಾಹನದ ಹಿಂದಿನ ಹಗ್ಗವನ್ನು ಬಿಚ್ಚಿ ತಾಡಪತ್ರಿಯನ್ನು ತೆಗೆಯಿಸಿ ನೋಡಲಾಗಿ ಅದರಲ್ಲಿ ಮದ್ಯದ ರಟ್ಟಿನ ಪೆಟ್ಟಿಗೆಗಳು ಇರುವುದು ಕಂಡುಬಂದವು. ಅವುಗಳನ್ನು ಪರೀಕ್ಷಿಸಿ ನೋಡಲು 20 x 48 x 180 ಎಂಎಲ್‌ದ ಡೈರೆಕ್ಟರ್ ಸ್ಪೆಶಲ್ ವಿಸ್ಕಿ, 40 x 48 x 180 ಎಂಎಲ್ ಲಗಾಸಿ ವಿಸ್ಕಿ, 200 x 48 x 180 ಎಂಎಲ್ ಹೈವರ್ಡ್ಸ್ ಫೈನ್ ವಿಸ್ಕಿ, 140 x 48 x 180 ಎಂಎಲ್ ಓಲ್ಡ್ ಟಾವರಿನ್ ವಿಸ್ಕಿ ಬಾಟಲಿಗಳ ಪೆಟ್ಟಿಗೆಗಳು ಇದ್ದವು ಅವುಗಳ ಕುರಿತು ಯಾರಾದರೂ ವಾರಸುದಾರರು ಇರುವ ಕುರಿತು ಶೋಧಿಸಲಾಗಿ ಯಾರು ಬರಲಿಲ್ಲವಾದ್ದರಿಂದ ಇದು ಅಕ್ರಮ ಮದ್ಯದ ಸಾಗಾಟವೆಂದು ಖಾತ್ರಿಯಾಗಿದ್ದರಿಂದ ಮತ್ತು ಅಬಕಾರಿ ಕಾಯ್ದೆ 1965ರ ಕಲಂ 11, 14, 34, 38ಎ, ಪ್ರಕಾರ ಅಪರಾಧ ಹಾಗೂ ಶಿಕ್ಷಾರ್ಹವಾಗಿದ್ದರಿಂದ ಹಾಜರಿದ್ದ ಪಂಚರ ಸಮಕ್ಷಮ ಪ್ರತಿ ಬ್ರ್ಯಾಂಡನಿಂದ 1 ಬಾಟಲಿಗಳಂತೆ ಒಟ್ಟು 04 ಬಾಟಲಿಯನ್ನು ಶ್ಯಾಂಪಲ್ ಕುರಿತು ತೆಗೆದುಕೊಂಡು ಅವುಗಳ ಬಾಯಿಗೆ ಬಟ್ಟೆ ಹಾಕಿ ದಾರದಿಂದ ಕಟ್ಟಿ ಸರ್ಕಾರಿ ಶೀಲಿನಿಂದ ಶೀಲುಮಾಡಿದ್ದು ಸ್ಥಳ ಪಂಚನಾಮೆಯೊಂದಿಗೆ ವಾಹನ ಮತ್ತು ಮುದ್ದೆ ಮಾಲನ್ನು ಜಪ್ತಿ ಮಾಡಿಕೊಂಡು ಕಛೇರಿಗೆ ಬಂದು ತಮ್ಮ ಗುನ್ನೆ ನಂ:37:2002-03, ದಿನಾಂಕ: 15.02.2003 ರಂತೆ ಮೊಕದ್ದಮೆಯನ್ನು ದಾಖಲಿಸಿಕೊಂಡು ಗುನ್ನೆಯ ಪ್ರಥಮ ವರ್ತಮಾನ ವರದಿಯನ್ನು ಗುನ್ನೆಯ ಪಿಎಫ್ ಪ್ರತಿಯೊಂದಿಗೆ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಅಲ್ಲದೇ ಮಾನ್ಯ ನ್ಯಾಯಾಲಯಕ್ಕೂ ಪ್ರ.ವ.ವರದಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಾಧಿಕಾರದಿಂದ ದಿನಾಂಕ: 24.02.2003 ಮತ್ತು 14.05.2003 ರಂದು ಪಿರ್ಯಾದುದಾರರಿಗೆ ಪ್ರಕರಣದಲ್ಲಿ ಜಪ್ತಾದ ವಾಹನದ ಮಾಲೀಕರ ಹೆಸರು ಮತ್ತು ವಿಳಾಸ ಹಾಗೂ ದಾಖಲಾತಿಗಳ ದೃಢೀಕೃತ ನಕಲುಗಳನ್ನು ರಾಸಾಯನ ತಜ್ಞರ ವರದಿಯನ್ನು ಸಲ್ಲಿಸುವಂತೆ ಪತ್ರ ಬರೆದು ಆದೇಶಿಸಲಾಗಿತ್ತು.

ಗುನ್ನೆ ದಾಖಲಾಗಿ ಒಂದು ತಿಂಗಳು ಮೇಲ್ಪಟ್ಟರೂ ಜಪ್ತು ಮಾಡಿದ ಮದ್ಯವು ತಮ್ಮದ್ದೆಂದು ಯಾರೂ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ. ಆದ್ದರಿಂದ ಅಬಕಾರಿ ಕಾಯ್ದೆ 1967ರ ಕಲಂ 43ಸಿ ಅಡಿಯಲ್ಲಿ (ಶ್ಯಾಂಪಲ್ ಬಾಟಲಿ ಹೊರತುಪಡಿಸಿ) ದಿನಾಂಕ: 20.03.2003 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸನ್ನದುದಾರರಲ್ಲಿ ವಿಲೇವಾರಿ ಮಾಡಲು ಆದೇಶಿಸಿದ್ದು ಇರುತ್ತದೆ.

ಮುಂದುವರೆದು ಪ್ರಾಧಿಕಾರದಿಂದ ದಿನಾಂಕ: 23.06.2003 ರಂದು ಸಾರಿಗೆ ಆಯುಕ್ತರು, ಆಂಧ್ರಪ್ರದೇಶ ರಾಜ್ಯ ಇವರಿಗೆ ವಾಹನ ಮಾಲೀಕರ ಹೆಸರು ಮತ್ತು ವಿಳಾಸವನ್ನು ತಿಳಿಸುವ ಕುರಿತು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಸೂಕ್ತ ನಿರ್ದೇಶನ ನೀಡಲು ಕೋರಲಾಗಿತ್ತು. ದಿನಾಂಕ: 17.07.2003 ರಂದು ಸಾರಿಗೆ ಆಯುಕ್ತರು, ಆಂಧ್ರಪ್ರದೇಶ ರಾಜ್ಯ ಇವರು ಉಪ ಸಾರಿಗೆ ಆಯುಕ್ತರು, ಚಿತ್ತೂರು ಇವರಿಗೆ ಪತ್ರ ಬರೆದು ಅದರ ಪ್ರತಿಯನ್ನು ಪ್ರಾಧಿಕಾರಕ್ಕೆ ಕಳುಹಿಸಿದ್ದು ಇರುತ್ತದೆ. ದಿನಾಂಕ: 05.08.2003 ರಂದು ಉಪ ಸಾರಿಗೆ ಆಯುಕ್ತರು, ಚಿತ್ತೂರು ಇವರು ಸದರಿ ಲಾರಿಯ ಮಾಲೀಕತ್ವ ಬದಲಾವಣೆ ಕುರಿತು ದಿನಾಂಕ: 21.06.2002 ರಂದು ಎನ್‌ಓಸಿ ಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬೆಂಗಳೂರು ಉತ್ತರ ಇವರಿಗೆ ಕಳುಹಿಸಿರುವುದಾಗಿ ತಿಳಿಸಿರುವ ಹಿನ್ನೆಲೆಯಲ್ಲಿ ದಿನಾಂಕ: 22.08.2003 ಮತ್ತು 19.09.2003 ರಂದು ಪ್ರಾ.ಸಾ.ಅ. ಬೆಂಗಳೂರು ಉತ್ತರ ಇವರಿಗೆ ವಾಹನದ ಮಾಲೀಕತ್ವದ ಕುರಿತು ಬಿ ವಹಿಯನ್ನು ಸಲ್ಲಿಸುವಂತೆ ಕೋರಲಾಗಿ ಸದರಿಯವರು ದಿನಾಂಕ: 09.09.2003 ರಂದು ಪತ್ರದ ಮುಖೇನ ದಿನಾಂಕ: 31.07.2002 ರಂದು ವಾಹನದ ಮಾಲೀಕತ್ವದ ಬದಲಾವಣೆ ಕುರಿತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬೆಂಗಳೂರು ಕೇಂದ್ರ ಇವರಿಗೆ ತೀರುವಳಿ ಪತ್ರ ನೀಡಲಾಗಿದ್ದು ಸದರಿಯವರನ್ನು ಸಂಪರ್ಕಿಸಲು ವಿನಂತಿಸಿರುತ್ತಾರೆ.

ಪ್ರಕರಣ ದಾಖಲಾಗಿ 8 ತಿಂಗಳು ಕಳೆದರೂ ಪ್ರಕರಣದಲ್ಲಿ ಜಪ್ತಾದ ವಾಹನ ಲಾರಿ ತಮ್ಮದೆಂದು ಹೇಳಿಕೊಂಡು ಈ ಪ್ರಾಧಿಕಾರದ ಮುಂದೆ ಯಾರೂ ಹಾಜರಾಗಿರುವುದಿಲ್ಲ ಮತ್ತು ದಾಖಲಾತಿಗಳನ್ನು ಸಹ ಸಲ್ಲಿಸಿರುವುದಿಲ್ಲ. ಕರ್ನಾಟಕ ಅಬಕಾರಿ ಕಾಯ್ದೆಗಳ ಕಲಂಗಳ ಅಡಿಯಲ್ಲಿ ಪ್ರಕರಣ ದಾಖಲು ಮಾಡಿದಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಗಳು ಇಲ್ಲದಿದ್ದಲ್ಲಿ ಈ ಸ್ವತ್ತುಗಳು ಯಾರೊಬ್ಬರ ಸ್ವಾಧೀನದಲ್ಲಿ ಬರುವ ಬಗ್ಗೆ ಸಮಾಧಾನಕರವಾದ ರುಜುವಾತನ್ನು ಹಾಜರುಪಡಿಸದಿದ್ದಾಗ ಪ್ರಕರಣವನ್ನು ಪತ್ತೆ ಹಚ್ಚಿ ಒಂದು ತಿಂಗಳ ಒಳಗೆ ಯಾರೊಬ್ಬರು ಪ್ರಾಧಿಕಾರದ ಮುಂದೆ ಹಾಜರಾಗಿ ಸದರಿ ಸ್ವತ್ತುಗಳು ತಮ್ಮವು ಎಂದು ಹೇಳಿ ಅದು ಕಾನೂನುಬದ್ಧವಾಗಿದೆ ಎಂಬ ಬಗ್ಗೆ ಸಾಕ್ಷಾಧಾರಗಳನ್ನು ಹಾಜರುಪಡಿಸದಿದ್ದಲ್ಲಿ ಸದರಿ ಸ್ವತ್ತುಗಳು ಅಬಕಾರಿ ಕಾಯ್ದೆ 1965ರ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳಾಗಿದ್ದಲ್ಲಿ ಕಲಂ 43ಸಿ ಯಲ್ಲಿ ಈ ಪ್ರಾಧಿಕಾರವು ಅಕ್ರಮ ಮದ್ಯವನ್ನು ಸಾಗಾಟಕ್ಕೆ ಬಳಸಿದ ವಾಹನವನ್ನು ಮತ್ತು ಮದ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದು.

ಅಬಕಾರಿ ಪ್ರಕರಣದಲ್ಲಿ ಜಪ್ತಾದ ವಾಹನದ ಮಾಲೀಕರು ತಮ್ಮ ಮುಗ್ಧತೆಯನ್ನು ಹಾಗೂ ವಾಹನವನ್ನು ಅಕ್ರಮ ಕೃತ್ಯಕ್ಕೆ ಬಳಸಿರುವುದಿಲ್ಲ ಎಂಬುದನ್ನು ಅವರೇ ಸ್ವತಃ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಬೇಕಾಗುತ್ತದೆ. ಆದರೆ ಈ ಪ್ರಕರಣದಲ್ಲಿ ಜಪ್ತಾದ ವಾಹನದ ಮಾಲೀಕರನ್ನು ಪತ್ತೆ ಹಚ್ಚಿ ಪ್ರಕರಣದ ವಿಚಾರಣೆಯಲ್ಲಿ ಭಾಗಿಯನ್ನಾಗಿಸಲು ಮಾಡಿದ ಪ್ರಾಧಿಕಾರದ ಪ್ರಯತ್ನಗಳು ಫಲಕಾರಿ ಯಾಗಿರುವುದಿಲ್ಲ. ಅಲ್ಲದೆ ವಾಹನ ಮಾಲೀಕರು ಎಂದು ಯಾರು ಹೇಳಿಕೊಂಡು ಪ್ರಾಧಿಕಾರದ ಮುಂದೆ ಹಾಜರಾಗಿ ವಾಹನ ತಮ್ಮದೆಂದು ಕ್ಲೇಮ್ ಮಾಡದೇ ಇರುವುದನ್ನು ಗಮನಿಸಿದಾಗ ಅವರ ತಿಳುವಳಿಕೆಯಿಂದ ಹಾಗೂ ಶಾಮಿಲಾಗಿಯೇ ವಾಹನವನ್ನು ಇಂಥಹ ಅನಧಿಕೃತ ಮದ್ಯದ ಸಾಗಾಟಕ್ಕೆ ಬಳಸಿರುವರು ಎಂದು ಪ್ರಾಧಿಕಾರವು ನಿಸ್ಸಂದೇಹವಾಗಿ ನಂಬಲೇಬೇಕಾಗುತ್ತದೆ. ಕಲಂ 40 ಅಡಿಯಲ್ಲಿ ಇದೆಲ್ಲವನ್ನು ಪರಿಶೀಲಿಸಲು ವಾಹನ ಮಾಲೀಕರ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಮದ್ಯದ ಸಾಗಾಣಿಕೆಗೆ ಉಪಯೋಗಿಸಲಾಗಿತ್ತು ಎಂದು ಭಾವಿಸಬೇಕಾಗುತ್ತದೆ.

ಕ್ಲೇಮುದಾರರಿಲ್ಲದ ಈ ವಾಹನವನ್ನು ಬಹಳ ಕಾಲ ಚಾಲನೆ ಇಲ್ಲದೆ ನಿಲ್ಲಿಸಿದಲ್ಲಿ ಅದು ಇನ್ನಷ್ಟು ಕೆಡುವ ಹಾಗೂ ಈ ಕಾರಣದಿಂದ ಅದರ ಬೆಲೆ ಕಡಿಮೆಯಾಗುವ ಸಾಧ್ಯತೆಗಳು ಇದ್ದು ಮೇಲಿನ ಎಲ್ಲ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಈ ಪ್ರಕರಣದಲ್ಲಿ ಲಭ್ಯವಿರುವ ದಾಖಲಾತಿಗಳ ಆಧಾರದ ಈ ಪ್ರಕರಣದಲ್ಲಿ ಅಕ್ರಮವಾಗಿ 3456 ಲೀ ಮದ್ಯವನ್ನು ಅಧಿಕೃತ ದಾಖಲಾತಿಗಳು ಇಲ್ಲದೆ ಮೇಲ್ಕಾಣಿಸಿದ ವಾಹನದಲ್ಲಿ ಸಾಗಾಟ ಮಾಡುತ್ತಿದ್ದಾಗ ಅಬಕಾರಿ ಸಬ್ ಇನ್ಸ್‌ಪೆಕ್ಟರ್, ವಿಚಕ್ಷಕದಳ ಹುಬ್ಬಳ್ಳಿ ಇವರು ಸದರಿ ವಾಹನವನ್ನು ಸ್ವತಂತ್ರ ಪಂಚರ ಸಮಕ್ಷಮದಲ್ಲಿ ತಪಾಸಣೆ ಮಾಡಿ ಸ್ಥಳ ಪಂಚನಾಮೆಯೊಂದಿಗೆ ಜಪ್ತು ಮಾಡಿದ್ದು ದಾಖಲಾತಿಗಳಿಂದ ದೃಢಪಟ್ಟಿರುವುದರಿಂದ ಏಕಪಕ್ಷೀಯ ನಿರ್ಣಯ ತೆಗೆದುಕೊಂಡು ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡುಬಂದಿರುವುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ ನಂ: ಇಎಕ್ಸ್‌ಇ:ಸಿಒಎನ್:45:2002-03, ದಿನಾಂಕ: 12ನೇ ನವೆಂಬರ್ 2003**

ಎ.ಕೆ. ಕುಲಕರ್ಣಿ, ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಧಾರವಾಡ ಜಿಲ್ಲೆ ಧಾರವಾಡ ಆದ ನಾನು, ಅಬಕಾರಿ ಕಾಯ್ದೆ 1965ರ ಕಲಂ 43-ಎ ದಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಜಪ್ತಾದ ವಾಹನದ ಮಾಲೀಕರು ಯಾರು ಎಂಬುದನ್ನು ತಿಳಿಯಲು ನಡೆಸಿದ ಸಾಕಷ್ಟು ಪ್ರಯತ್ನಗಳು ಫಲಕಾರಿಯಾಗದೇ ಇರುವುದರಿಂದ ಕಲಂ 43-ಬಿ ನಡುವಳಿಗಳನ್ನು ಕೈ ಬಿಟ್ಟು ಅಬಕಾರಿ ಸಬ್ ಇನ್ಸ್‌ಪೆಕ್ಟರ್, ವಿಚಕ್ಷಕದಳ ಹುಬ್ಬಳ್ಳಿ, ಇವರು ದಾಖಲಿಸಿದ ಗುನ್ನೆ ನಂ:37:2002-03 ದಿನಾಂಕ: 15.02.2003 ರಲ್ಲಿ ಜಪ್ತಿ ಮಾಡಿದ ವಾಹನ ಲಾರಿ ನಂ: ಎಎಪಿ:8292 ನೇದ್ದನ್ನು ಅಬಕಾರಿ ಕಾಯ್ದೆ 1965ರ ಕಲಂ 43ಸಿ ಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ ಹಾಗೂ ಈಗಾಗಲೇ ದಿನಾಂಕ: 20.03.2003 ರಂದು ಪ್ರಕರಣದಲ್ಲಿ ಜಪ್ತಾದ 3456 ಲೀ. ಮದ್ಯವನ್ನು (ಶ್ಯಾಂಪಲ್ ಬಾಟಲಿ ಹೊರತುಪಡಿಸಿ) ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಆದೇಶಿಸಿದ ಕ್ರಮವನ್ನು ಸಿಂಧುತ್ವಗೊಳಿಸಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

ಎ.ಕೆ. ಕುಲಕರ್ಣಿ
ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಧಾರವಾಡ ಜಿಲ್ಲೆ.

ಪಿ.ಆರ್. 1383

**ಕಂದಾಯ ಇಲಾಖೆ**

**ನಂ: ಎಲ್‌ಎನ್‌ಡಿ:ಸಿಆರ್ 42:98-99**

**ನಮೂನೆ-27**

ಕರ್ನಾಟಕ ಭೂ ಕಂದಾಯ ಕಾಯಿದೆ 1964ರ ಅಧಿನಿಯಮ 94ನೇ 68(1)ನೇ ಪ್ರಕರಣದ ಮೇರೆಗೆ ಕರ್ನಾಟಕ ಭೂ ಕಂದಾಯ 1966 ನಿಯಮ 94ರ ಮೇರೆಗೆ

ಜಿಲ್ಲಾಧಿಕಾರಿಗಳು ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಪತ್ರದ ಸಂಖ್ಯೆ: ಎಲ್‌ಎನ್‌ಡಿ:ಸಿಆರ್ 06:01-02, ದಿನಾಂಕ: 27.2.2002.

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸಾರ್ವಜನಿಕ ಜಮೀನಿನ ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡುಬಂದಿರುವುದರಿಂದ.

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ 1ನೇ ಉಪ ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸಾರ್ವಜನಿಕ ಜಮೀನು ಬಸವನಕಟ್ಟೆ ದನಗಳಿಗೆ ರಿಸರ್ವ ಸೇಂದಿ ವನವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸಾರ್ವಜನಿಕ ಬಸವನಕಟ್ಟೆ ದನಗಳಿಗೆ ರಿಸರ್ವ ಸೇಂದಿವನ ಸದರಿ ಭಾಗದಲ್ಲಿ ಮತ್ತು ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಉದ್ದೇಶಿಸಿ ಈ ಮೂಲಕ ಘೋಷಿಸಿರುತ್ತಾರೆ.

ಸಾರ್ವಜನಿಕ ಬಸವನಕಟ್ಟೆ ದನಗಳಿಗೆ ರಿಸರ್ವ ಸೇಂದಿ ವನ ಹಕ್ಕಿನ ಜೊತೆ ಸದರಿ ಬಸವನಕಟ್ಟೆ ದನಗಳಿಗೆ ರಿಸರ್ವ ಸೇಂದಿ ವನದ ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕೊಳ್ಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವವರ ಯಾವುದೇ ಸಾರ್ವಜನಿಕನು ಅಥವಾ ಯಾವನೆ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ 90 ದಿನಗಳೊಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಅಪೇಕ್ಷಣೆಯನ್ನು ಅಂಥಾ ಹಿತಾಸಕ್ತಿಯು ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಬಹುದಾದ ರೀತಿಯನ್ನು ಮತ್ತು ಅಂಥ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೇಮ್ ಮಾಡಲಾದ ಮೊಬಲಗುಗಳು ಮತ್ತು ವಿವರವನ್ನು ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ (ಡೆಪ್ಯೂಟಿ ಕಮೀಷನರಿಗೆ) ಬರಹದಲ್ಲಿ ಕಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೇಮು ಇನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಜಿಲ್ಲಾಧಿಕಾರಿಗಳು (ಡೆಪ್ಯೂಟಿ ಕಮೀಷನರ್) ಪರಿಶೀಲಿಸುತ್ತಾರೆ.

**ಅಧಿಸೂಚನೆ**

| | | | |
|---|---|---|---|
| 1) | ಮಲ್ಲಾಪುರ ಗ್ರಾಮದ ಬಡಿಯನ ಕೆರೆ ಇರುವ ಗ್ರಾಮದ ಹೆಸರು | : | ಮಲ್ಲಾಪುರ ಗ್ರಾಮ |
| 2) | ತಾಲ್ಲೂಕು | : | ಭದ್ರಾವತಿ ಹೊಳೆಹೊನ್ನೂರು ಹೋಬಳಿ |
| 3) | ಜಿಲ್ಲೆ | : | ಶಿವಮೊಗ್ಗ |
| 4) | ಬಡಿಯನ ಕೆರೆ ವಿವರ | : | ಸರ್ವೆ ನಂಬರ್ 64 |
| 5) | ಬಡಿಯನ ಕೆರೆ ವಿಸ್ತೀರ್ಣ | : | 1-20 |

6) ಬಡಿಯನ ಕೆರೆ : ಪೂರ್ವ : ರಸ್ತೆ ಸ.ನಂ.96ರ ಜಮೀನು
ಪಶ್ಚಿಮ : ಸ.ನಂ.64ರ ಕೆರೆಯ ಜಾಗ
ಉತ್ತರ : ಸ.ನಂ.64ರ ಕೆರೆಯ ಜಾಗ ಮತ್ತು ಅದರಲ್ಲಿಯ ಕೋಡಿ (ಹಳ್ಳ)
ದಕ್ಷಿಣ : ಸ.ನಂ.64ರ ಕೆರೆಯ ಜಾಗ.

7) ಬಡಿಯನ ಕೆರೆ ಅಥವಾ ಅದರ ಭಾಗ : 1-20 ಎಕರೆ ಅಥವಾ ಅದರ ಭಾಗ.

ತಹಸೀಲ್ದಾರ್
ಭದ್ರಾವತಿ ತಾಲ್ಲೂಕು.

ಪಿ.ಆರ್. 1385

**ಅಬಕಾರಿ ಇಲಾಖೆ**

**ಪ್ರಾಧೀಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಬಿಜಾಪುರ ಜಿಲ್ಲೆ, ಬಿಜಾಪುರ ಇವರ ನ್ಯಾಯಾಲಯದಲ್ಲಿ**

**ಯಾರಿಗೆ ಸಂಬಂಧಿಸಿದೆಯೋ ಅಂಥವರಿಗೆ**

1. ಟ್ಯಾಂಕರ್ ನಂ: ಎಂ.ಸಿ.ಯು.4530 ವಾಹನದಲ್ಲಿ 9750 ಲೀಟರ್ ಸ್ಪೀರಿಟ್ (ಮದ್ಯಸಾರ) ಜಪ್ತಿ ಮಾಡಿ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಝಳಕಿ ಪೊಲೀಸ್ ಠಾಣೆ ಇವರ ಗುನ್ನೆ ನಂ:39/1994, ದಿನಾಂಕ: 25.05.1994.
2. ಸ್ವರಾಜ ಮಜಡಾ (ಮಿನಿ ಗೂಡ್ಸ್ ಟ್ರಕ್) ನಂ: ಕೆಎ-04-ಬಿ-3434 ಈ ವಾಹನದಲ್ಲಿ ಆಫೀಸರ್ಸ್ ಚಾಯ್ಸಿ ಪ್ರಿಸ್ಟೇಜ್ ವಿಸ್ಕಿ 250 ಬಾಕ್ಸ್ 2160.000 ಲೀಟರ್ ಮದ್ಯ ಜಪ್ತಿ ಮಾಡಿ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಝಳಕಿ ಪೊಲೀಸ್ ಠಾಣೆ ಇವರ ಗುನ್ನೆ ನಂ:14/2003, ದಿನಾಂಕ: 27.02.2003.

ಮೇಲ್ಕಂಡ ಪ್ರಕರಣಗಳಲ್ಲಿ ಅನಧೀಕೃತವಾಗಿ ದೇಶಿಯವಾದ ವಿದೇಶಿ ಮದ್ಯವನ್ನು ಮತ್ತು ಮದ್ಯಸಾರ ಸಾಗಾಣಿಕೆ ಮಾಡುತ್ತಿದ್ದಾಗ ಮೊಕದ್ದಮೆಗಳು ದಾಖಲಿಸಿ ಸದರಿ ವಾಹನಗಳ ಮಾಲೀಕರು ಜಪ್ತು ಮಾಡಿದ ದೇಶಿಯವಾದ ವಿದೇಶಿ ಮದ್ಯ ಹಾಗೂ ಮದ್ಯಸಾರ ಜಪ್ತು ಮಾಡಿದ ವಾಹನಗಳ ಬಗ್ಗೆ ಮಾಲೀಕತ್ವವನ್ನು ನಿರೂಪಿಸಲು ಸಂಬಂಧಿಸಿದ ದಾಖಲೆಗಳನ್ನು ಈ ಪ್ರಕಟಣೆ ಆದ ದಿನಾಂಕದಿಂದ 15 ದಿನಗಳ ಒಳಗೆ ನಿರೂಪಿಸತಕ್ಕದ್ದು.

ಹಾಗೊಂದು ವೇಳೆ ನಿಗದಿತ ಅವಧಿಯೊಳಗೆ ಯಾರೇ ಆಗಲಿ ಮುಂದೆ ಬಂದು ಜಪ್ತು ಮಾಡಿದ ಮುದ್ದೇಮಾಲು ಮತ್ತು ವಾಹನದ ಮೇಲೆ ತಮ್ಮ ಹಕ್ಕನ್ನು ಸ್ಥಾಪಿಸದಿದ್ದಲ್ಲಿ ಜಪ್ತು ಮಾಡಿದ ವಾಹನಗಳನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಮತ್ತು 4(ಸಿ) ರಂತೆ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಕೈಕೊಳ್ಳಲಾಗುವುದು. ತಡವಾಗಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಈ ಪತ್ರಿಕಾ ಪ್ರಕಟಣೆಯನ್ನು ದಿನಾಂಕ: 18.12.2003 ರಂದು ನನ್ನ ಸಹಿ ಮತ್ತು ಮೊಹರು ಹಾಕಿ ನೀಡಲಾಗಿದೆ.

ಶಾಮ ಸಾವಳಗಿ
ಪ್ರಾಧೀಕೃತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು,
ಬಿಜಾಪುರ ಜಿಲ್ಲೆ, ಬಿಜಾಪುರ.

ಪಿ.ಆರ್. 1386

**ಅಬಕಾರಿ ಇಲಾಖೆ**

**ಪ್ರಾಧೀಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಬಿಜಾಪುರ ಜಿಲ್ಲೆ, ಬಿಜಾಪುರ ಇವರ ನ್ಯಾಯಾಲಯದಲ್ಲಿ**

**ಯಾರಿಗೆ ಸಂಬಂಧಿಸಿದೆಯೋ ಅಂಥವರಿಗೆ**

1. ಅಶೋಕ ಲೇಲ್ಯಾಂಡ್ ಟ್ರಕ್ ನಂ: ಕೆಎ-22-969 ವಾಹನದಲ್ಲಿ 4636.800 ಲೀಟರ್ ಮದ್ಯ ಜಪ್ತಿ ಮಾಡಿ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಗಾಂಧಿ ಚೌಕ್ ಪೊಲೀಸ್ ಠಾಣೆ ಇವರ ಗುನ್ನೆ ನಂ: 29/03, ದಿನಾಂಕ: 27.01.2003.
2. ಅಶೋಕ ಲೇಲ್ಯಾಂಡ್ ಲಾರಿ ಸಂಖ್ಯೆ: ಸಿಎನ್‌ಡಿ:5185 ಚೆಸ್ಸಿ ನಂ: ಎಎಲ್‌ಇಜಿ: 170974, ಇಂಜಿನ್ ನಂ: ಎಎಲ್‌ಇಜಿ: 31812 ವಾಹನದಲ್ಲಿ 3894.120 ಲೀಟರ್ ದೇಶಿಯವಾದ ವಿದೇಶಿ ಮದ್ಯವನ್ನು ಅಬಕಾರಿ ನಿರೀಕ್ಷಕರು, ಬಿಜಾಪುರ ಉಪ ವಿಭಾಗ ಇವರ ಗುನ್ನೆ ನಂ:27/2002-03, ದಿನಾಂಕ: 22.06.2003.
3. ಅಶೋಕ ಲೇಲ್ಯಾಂಡ್ ಲಾರಿ ನಂ: ಸಿಎನ್‌ಡಿ:8310, ಟ್ರಕ್ ಮತ್ತು 4351.320 ಲೀಟರ್ ದೇಶಿಯವಾದ ವಿದೇಶಿ ಮದ್ಯ ಅಬಕಾರಿ ಉಪ ನಿರೀಕ್ಷಕರು ಇ.ಐ.ಬಿ. ಬೆಳಗಾಂವ ಇವರ ಗುನ್ನೆ ನಂ:27/2002-03, ದಿನಾಂಕ: 13.04.2003.

ಮೇಲ್ಕಂಡ ಪ್ರಕರಣಗಳಲ್ಲಿ ಅನಧೀಕೃತವಾಗಿ ದೇಶಿಯವಾದ ವಿದೇಶಿ ಮದ್ಯವನ್ನು ಸಾಗಾಣಿಕೆ ಮಾಡುತ್ತಿದ್ದಾಗ ಮೊಕದ್ದಮೆಗಳಲ್ಲಿ ಮೇಲೆ ತಿಳಿಸಿದ ವಾಹನಗಳನ್ನು ಜಪ್ತು ಮಾಡಿದ್ದು ಮೇಲೆ ತೋರಿಸಿದ ವಾಹನಗಳ ಮಾಲೀಕರು ಜಪ್ತು ಮಾಡಿದ ದೇಶಿಯವಾದ ವಿದೇಶಿ ಮದ್ಯ ಮತ್ತು ಜಪ್ತು ಮಾಡಿದ ವಾಹನಗಳ ಬಗ್ಗೆ ಮಾಲೀಕತ್ವವನ್ನು ನಿರೂಪಿಸಲು ಸಂಬಂಧಿಸಿದ ದಾಖಲೆಗಳನ್ನು ರಾಜ್ಯ ಸರ್ಕಾರದ ಪತ್ರಾಂಕಿತ ಪತ್ರದಲ್ಲಿ ಪ್ರಕಟಣೆ ಆದ ದಿನಾಂಕದಿಂದ 15 ದಿನಗಳ ಒಳಗೆ ನಿರೂಪಿಸತಕ್ಕದ್ದು.

ಹಾಗೊಂದು ವೇಳೆ ನಿಗದಿತ ಅವಧಿಯೊಳಗೆ ಯಾರೇ ಆಗಲಿ ಮುಂದೆ ಬಂದು ತಮ್ಮ ಹಕ್ಕನ್ನು ಜಪ್ತು ಮಾಡಿದ ಮುದ್ದೇಮಾಲು ಮತ್ತು ವಾಹನದ ಮೇಲೆ ತಮ್ಮ ಹಕ್ಕನ್ನು ಸ್ಥಾಪಿಸದಿದ್ದಲ್ಲಿ ಜಪ್ತು ಮಾಡಿದ ವಾಹನಗಳನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಮತ್ತು 4(ಸಿ) ರಂತೆ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಕೈಕೊಳ್ಳಲಾಗುವುದು. ತಡವಾಗಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯ ಪತ್ರದಲ್ಲಿ ಬರಲು ಪ್ರಕಟಣೆಯನ್ನು ದಿನಾಂಕ: 20.12.2003 ರಂದು ನನ್ನ ಸಹಿ ಮತ್ತು ಮೊಹರು ಹಾಕಿ ನೀಡಲಾಗಿದೆ.

**ಕೆ.ಆರ್. ಗೋವಿಂದಶೆಟ್ಟಿ**

ಪಿ.ಆರ್. 1387

ಪ್ರಾಧೀಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಬಿಜಾಪುರ ಜಿಲ್ಲೆ, ಬಿಜಾಪುರ.

## ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ

## ಅಧಿಸೂಚನೆ

**ಸಂಖ್ಯೆ: ಅಸಾಂನಿ/ಆಡಳಿತ/34/ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್ 2002**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ, 2000 (2000ದ ಕರ್ನಾಟಕ ಅಧಿನಿಯಮ ಸಂಖ್ಯೆ 28) ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002ರ ಪ್ರಕಾರ, ಈ ಕೆಳಗೆ ಸಹಿ ಮಾಡಿರುವ ಪ್ರಾಧಿಕಾರವು ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಅಧಿಕಾರಿಗಳನ್ನು ಕೆಳಕಂಡಂತೆ ನಾಮ ನಿರ್ದೇಶನ ಮಾಡಲಾಗಿದೆ.

1) **ಸಕ್ಷಮ ಪ್ರಾಧಿಕಾರ**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 2(ಡಿ) ಮತ್ತು 2(ಇ) ದಲ್ಲಿ ಪರಿಭಾಷಿಸಿರುವಂತೆ, ಮಾಹಿತಿಯನ್ನು ನೀಡಲು

ಅ) ಆಯಾ ತಾಂತ್ರಿಕ ವಿಭಾಗದ ಜಂಟಿ ನಿರ್ದೇಶಕರು ತಾಂತ್ರಿಕ ವಿಭಾಗಕ್ಕೆ ಸಂಬಂಧಿಸಿದಂತೆ ಸಕ್ಷಮ ಪ್ರಾಧಿಕಾರರಾಗಿರುತ್ತಾರೆ.

ಆ) ಆಡಳಿತಾಧಿಕಾರಿಗಳು, ಆಡಳಿತ ಮತ್ತು ಲೆಕ್ಕ ವಿಭಾಗಕ್ಕೆ ಸಂಬಂಧಿಸಿದಂತೆ ಸಕ್ಷಮ ಪ್ರಾಧಿಕಾರರಾಗಿರುತ್ತಾರೆ.

ಇ) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಆಯಾ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಕಛೇರಿಯ ತಾಂತ್ರಿಕ ಮತ್ತು ಆಡಳಿತ ಹಾಗೂ ಲೆಕ್ಕ ವಿಷಯಗಳಿಗೆ ಸಂಬಂಧಿಸಿದಂತೆ ಸಕ್ಷಮ ಪ್ರಾಧಿಕಾರರಾಗಿರುತ್ತಾರೆ.

2) **ಸಾರ್ವಜನಿಕ ಪ್ರಾಧಿಕಾರ**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2002ದ 2(ಡಿ) ಮತ್ತು 2(ಇ) ನಲ್ಲಿ ಪರಿಭಾಷಿಸಿರುವಂತೆ ಮಾಹಿತಿಯನ್ನು ನೀಡಲು ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ನಿರ್ದೇಶಕರು "ಸಾರ್ವಜನಿಕ ಪ್ರಾಧಿಕಾರ" ಆಗಿರುತ್ತಾರೆ.

3) **ಅಪೀಲು ಪ್ರಾಧಿಕಾರ**

ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಇವರು ಸಾರ್ವಜನಿಕರಿಗೆ ಮಾಹಿತಿ/ದಾಖಲೆಗಳನ್ನು ನೀಡುವ ಅಪೀಲು ಪ್ರಾಧಿಕಾರ ಆಗಿರುತ್ತಾರೆ. ಪರಂತು, ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ, 2000ದ 4ನೇ ಪ್ರಕರಣದ (2)ನೇ ಉಪ ಪ್ರಕರಣದ (ಎಫ್) ಖಂಡದ ಅಡಿಯಲ್ಲಿ ಮಾಹಿತಿಯನ್ನು ತಡೆದಿರುವ ಆದೇಶದ ವಿರುದ್ಧ ಯಾವುದೇ ಅಪೀಲನ್ನು ಹೂಡತಕ್ಕದ್ದಲ್ಲ.

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ, 2000ದ ಪ್ರಕರಣ (3)ರ ಅನ್ವಯ ಕೆಳಕಂಡ ಪ್ರಕಟಣೆ/ವರದಿಗಳನ್ನು ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ವಿವಿಧ ವಿಭಾಗಗಳಲ್ಲಿ ನಿರ್ವಹಿಸಬೇಕಾಗುತ್ತದೆ. ಹಾಗೂ ಸಾರ್ವಜನಿಕರ ಕೋರಿಕೆ ಮೇರೆಗೆ, ಈ ಮಾಹಿತಿಗಳನ್ನು ಒದಗಿಸತಕ್ಕದ್ದಾಗಿದೆ. ಪರಂತು, ಮೇಲ್ಕಂಡ ಪ್ರಕಟಣೆಗಳಲ್ಲದೇ ಇನ್ನಾವುದೇ ರೀತಿಯ ರಹಸ್ಯವಾಗಿಡಲ್ಪಡುವ ನಿರ್ದಿಷ್ಟವಾದ ವಿಷಯಗಳ ಮಾಹಿತಿಗಳನ್ನೊಳಗೊಂಡ ಸಮೀಕ್ಷೆಗಳ/ಅಧ್ಯಯನಗಳ/ಪ್ರಯೋಗಗಳ ಭರ್ತಿ ಮಾಡಿದ ಅನುಸೂಚಿಗಳನ್ನು ನೀಡತಕ್ಕದ್ದಲ್ಲ.

**I) ನಾಗರೀಕ ನೋಂದಣಿ, ರಾಷ್ಟ್ರೀಯ ಮಾದರಿ ಸಮೀಕ್ಷೆ ಮತ್ತು ಸ್ಥಳೀಯ ಸಂಸ್ಥೆಗಳ ಅಂಕಿ ಅಂಶಗಳ ವಿಭಾಗ**

ಅ) ಜನನ-ಮರಣ ನೋಂದಣಿ
ಆ) ರಾಷ್ಟ್ರೀಯ ಮಾದರಿ ಸಮೀಕ್ಷೆ
ಇ) ಸ್ಥಳೀಯ ಸಂಸ್ಥೆಗಳ ಅಂಕಿ ಅಂಶಗಳು
ಈ) ರಾಜ್ಯ ನಾಗರೀಕ ಸೇವೆಯಲ್ಲಿನ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪ್ರಾತಿನಿಧ್ಯತೆ ವರದಿ

**II) ರಾಜ್ಯಾದಾಯ, ಕೈಗಾರಿಕೆ ಮತ್ತು ಬೆಲೆ ಅಂಕಿ ಅಂಶಗಳ ವಿಭಾಗ**

ಅ) ಬೆಲೆ ಅಂಕಿ ಅಂಶಗಳು
ಆ) ರಾಜ್ಯ ಆಂತರಿಕ ಉತ್ಪನ್ನ
ಇ) ಕೈಗಾರಿಕಾ ಉತ್ಪಾದನಾ ಸೂಚ್ಯಾಂಕ

**III) ಕೃಷಿ ಗಣತಿ, ಮಳೆ ಅಂಕಿ ಅಂಶಗಳು ಹಾಗೂ ಗಣಕ ವಿಭಾಗ**

ಅ) ಮಳೆ ಅಂಕಿ ಅಂಶಗಳು
ಆ) ಕೃಷಿ ಗಣತಿ ವರದಿ ಮತ್ತು ಕೋಷ್ಠಕಗಳು
ಇ) ಇನ್‌ಪುಟ್ ಸಮೀಕ್ಷಾ ವರದಿ
ಈ) ನಾಲ್ಕನೇ ಆರ್ಥಿಕ ಗಣತಿ (ಬೆಲೆಯನ್ನು ನಿಗದಿಪಡಿಸಿರುತ್ತದೆ.)

**IV) ಪ್ರಕಟಣೆ ವಿಭಾಗ**

ಅ) ಕರ್ನಾಟಕ ಅಂಕಿ ಅಂಶಗಳ ನೋಟ
ಆ) ಜಿಲ್ಲಾ ಅಂಕಿ ಅಂಶಗಳ ನೋಟ
ಇ) ಕರ್ನಾಟಕ-ಭಾರತ ಮೂಲ ಮಾಹಿತಿ

**V) ಕೃಷಿ ಅಂಕಿ ಅಂಶಗಳ ವಿಭಾಗ**

ಅ) ಪ್ರಮುಖ ಬೆಳೆಗಳ ಪೂರ್ಣ ಪರಿಷ್ಕೃತ ಅಂದಾಜುಗಳು
ಆ) ವಾರ್ಷಿಕ ಋತು ಮತ್ತು ಬೆಳೆ ವರದಿ

**VI) ಬೆಳೆ ವಿಮಾ ವಿಭಾಗ**

ಅ) ಬೆಳೆ ಅಂದಾಜು ಸಮೀಕ್ಷೆ ವರದಿ
ಆ) ತಾಲ್ಲೂಕುವಾರು ಬೆಳೆ ಇಳುವರಿ

VII) ಆಡಳಿತ ಮತ್ತು ಲೆಕ್ಕ ವಿಭಾಗ

ಅ) ಜ್ಯೇಷ್ಠತಾ ಪಟ್ಟಿ

ಆ) ಕಛೇರಿ ಆದೇಶಗಳು

ಇ) ಆಡಿಟ್ ವರದಿಗಳು

**ಹೆಚ್.ಡಿ. ಗಣೇಶ್**
ನಿರ್ದೇಶಕರು,
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ.

ಪಿ.ಆರ್. 1388

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಮರಣ ಪ್ರಕರಣ ಸಂಖ್ಯೆ: ಕಾಅಬ-2: ಕಾನಪ:ಎಸ್ಆರ್-151:2003, ದಿನಾಂಕ: 5ನೇ ಡಿಸೆಂಬರ್ 2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| ಶ್ರೀಮತಿ ಶಾಂತಬಾಯಿ ಶಿವಪ್ಪಾ ಬಿರಾದಾರ, ವಾಸ-ಹಿಟ್ನಳ್ಳಿ, ಬಿಜಾಪೂರ ತಾಲ್ಲೂಕು, ಬಿಜಾಪೂರ ಜಿಲ್ಲೆ. | 1) | ಚೆನ್ನಪ್ಪಾ ದೂಳಪ್ಪಾ ಪಠನಾದ ವಾಸ-ಹಿಟ್ನಳ್ಳಿ, ಬಿಜಾಪೂರ ತಾ: ಜಿ:. |
| | 2) | ದಿ ಬ್ರ್ಯಾಂಚ್ ಮ್ಯಾನೇಜರ್, ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಬಿದರಿ ಕಾಂಪ್ಲೆಕ್ಸ್, ಎಸ್ಎಸ್ ಫ್ರಂಟ್‌ರೋಡ್, ಬಿಜಾಪೂರ. |

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಮಲ್ಲಪ್ಪಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 26.10.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ನಾನು ಶ್ರೀಮತಿ ಶಾಂತಬಾಯಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪುರ.

ಪಿ.ಆರ್. 1389

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**

**ಮರಣ ಪ್ರಕರಣ ಸಂಖ್ಯೆ: ಕಾಅಬ-2: ಕಾನಪ:ಎಸ್ಆರ್-153:2003, ದಿನಾಂಕ: 5ನೇ ಡಿಸೆಂಬರ್ 2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| ಶ್ರೀಮತಿ ಬೋರವ್ವಾ ಮರಲಿಂಗಪ್ಪಾ ಇಳಗೇರ ವಾಸ-ಕೊಡಗನೂರು, ತಾ: ಬಸವನ ಬಾಗೇವಾಡಿ, ಜಿಲ್ಲೆ: ಬಿಜಾಪೂರ. (ಹಾಗೂ ಇತರೆ 3 ಜನರು) | 1) | ಮುದ್ದಪ್ಪಾ ಚೆನ್ನಪ್ಪಾ ಇಳಗೇರ, ವಾಸ-ಕೊಡಗನೂರು, ತಾ: ಬಿ. ಬಾಗೇವಾಡಿ, ಬಿಜಾಪೂರ ಜಿಲ್ಲೆ. |
| | 2) | ದಿ ಬ್ರ್ಯಾಂಚ್ ಮ್ಯಾನೇಜರ್, ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ಬಿಜಾಪೂರ. |

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಮರಲಿಂಗಪ್ಪಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 7.4.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ನಾನು ಶ್ರೀಮತಿ ಬೋರವ್ವಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪುರ.

ಪಿ.ಆರ್. 1390

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**
**ಮರಣ ಪ್ರಕರಣ ಸಂಖ್ಯೆ: ಕಾಅಬ-2: ಕಾನಪ:145:2003, ದಿನಾಂಕ: 13ನೇ ನವೆಂಬರ್ 2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| ಶ್ರೀಮತಿ ಲಕ್ಷ್ಮೀಬಾಯಿ ಶರಣಪ್ಪಾ ಕುಂಬಾರ, ವಾಸ: ಇವಂಗಿ, ಬಿ: ಬಾಗೇವಾಡಿ ತಾಲ್ಲೂಕು, ಬಿಜಾಪೂರ ಜಿಲ್ಲೆ. | 1) | ಶ್ರೀ ಕಾಂತಪ್ಪಾ ಯಲಗುರದಪ್ಪಾ ಸಾಲಗಾರ ವಾಸ: ಇವಂಗಿ, ಬಿ.ಬಾಗೇವಾಡಿ ತಾಲ್ಲೂಕು, ಬಿಜಾಪೂರ ಜಿಲ್ಲೆ. |
| | 2) | ದಿ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಎಸ್.ಎಸ್. ಫ್ರಂಟ್ ರೋಡ್, ಬಿಜಾಪೂರ. |

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಬೀಮಪ್ಪಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 5.5.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ನಾನು ಶ್ರೀಮತಿ ಲಕ್ಷ್ಮೀಬಾಯಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**
ಪಿ.ಆರ್. 1391 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ,
ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**
**ಮರಣ ಪ್ರಕರಣ ಸಂಖ್ಯೆ: ಕಾಅಬ-2: ಕಾನಪ:155:2003, ದಿನಾಂಕ: 17ನೇ ಡಿಸೆಂಬರ್ 2003**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| ಶ್ರೀಮತಿ ರತ್ನಾಬಾಯಿ ಮಲ್ಲಪ್ಪಾ ದಡ್ಡಿ ವಾಸ: ವಿರೇಶ್ವರ ನಗರ, ಮುದ್ದೇಬಹಾಳ ತಾಲ್ಲೂಕು, ಬಿಜಾಪೂರ ಜಿಲ್ಲೆ. | 1) | ಕಾರ್ಯನಿರ್ವಾಹಕ ಅಭಿಯಂತರು, (ವಿದ್ಯುತ್) (ಒ ಆ್ಯಂಡ್ ಎಂ) ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬಿಜಾಪುರ. |

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಮಲ್ಲಪ್ಪಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 31.10.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ನಾನು ಶ್ರೀಮತಿ ರತ್ನಾಬಾಯಿ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**
ಪಿ.ಆರ್. 1392 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ,
ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಚಾಮರಾಜನಗರ ಜಿಲ್ಲೆ**
**ಸಂಖ್ಯೆ: ಡಬ್ಲ್ಯೂಸಿಎ-41:2003, ದಿನಾಂಕ: 17ನೇ ನವೆಂಬರ್ 2003**
**ಸಾರ್ವಜನಿಕ ನೋಟೀಸ್**

| ಅರ್ಜಿದಾರರು | ಪ್ರತಿವಾದಿಗಳು |
|---|---|
| 1. ವಿ.ಕೆ. ರಾಧಾ ಕೋಂ ಹೆಚ್.ಎ. ನಾಗರಾಜು | 1. ಎಸ್.ಕೆ. ಓಜೀರ್ ಬಿನ್ ಕುಮುದನ್ ಸಾಹೇಬ್, ಮನೆ ನಂ:98:ಡಿ, ಬನುಮಯ್ಯ ರಸ್ತೆ, ಮೈಸೂರು. |
| 2. ಹೆಚ್.ಎಲ್. ನಾಗರಾಜು ಬಿನ್ ಲಕ್ಷ್ಮಣನಾಯ್ಡು, ಗೌರಿಶಂಕರ್ ಭವನ, 2ನೇ ಮುಖ್ಯ ರಸ್ತೆ, ಧನ್ವಂತರಿ ರಸ್ತೆ, ಮೈಸೂರು. | 2. ವಿಭಾಗೀಯ ವ್ಯವಸ್ಥಾಪಕರು, ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಜೆ.ಎಲ್.ಬಿ. ರಸ್ತೆ, ಮೈಸೂರು. |

ಮೃತ ರವಿ ಇವರ ತಂದೆ ತಾಯಿಗಳಾದ ಶ್ರೀಮತಿ ವಿ.ಕೆ. ರಾಧಾ ಮತ್ತು ಹೆಚ್.ಎಲ್. ನಾಗರಾಜು ಇವರುಗಳು ಈ ನ್ಯಾಯಾಲಯದಲ್ಲಿ ದಿನಾಂಕ: 10.11.2003 ರಂದು ಅರ್ಜಿ ದಾಖಲಿಸಿ, ಮೃತ ರವಿಯು 1ನೇ ಪ್ರತಿವಾದಿಯಲ್ಲಿ ಲಾರಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ ದಿನಾಂಕ: 15.9.2003 ರಂದು ಮೃತಪಟ್ಟಿರುತ್ತಾನೆಂದು ತಿಳಿಸಿದ್ದು, ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಆಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿ ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರಿಕರಿಗೂ ಹಾಗೂ ಸದರಿ ಮೃತನ ಬೇರೆ ಆಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಎನ್. ಕಲ್ಲುಮಾಳಿಗೆಗೌಡ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಾಮರಾಜನಗರ ಜಿಲ್ಲೆ, ಚಾಮರಾಜನಗರ.

ಪಿ.ಆರ್. 1396

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬಿಜಾಪುರ ಇವರಲ್ಲಿ**
**ಮರಣ ಪ್ರಕರಣ ಸಂಖ್ಯೆ: ಕಾಅಬ-2: ಕಾನಪ:157:2003, ದಿನಾಂಕ: 22ನೇ ಡಿಸೆಂಬರ್ 2003**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| ಶ್ರೀಮತಿ ಸುಶೀಲವ್ವಾ ಗಂಡ ಶಿವಪ್ಪಾ ಮಾದರ ಉರುಫ್ - ಹೊಸಮನಿ, ವಾಸ: ಬಸವನ ಬಾಗೇವಾಡಿ, ಬಿ.ಬಾಗೇವಾಡಿ ತಾಲ್ಲೂಕು, ಬಿಜಾಪೂರ ಜಿಲ್ಲೆ. (ಹಾಗೂ ಇತರೆ 4 ಜನರು) | | 1) ಶ್ರೀ ಎಂ.ಬಿ. ಹಡಪದ, ವಾಸ: ಗಣಪತ ಚೌಕ, ಬಸವನ ಬಾಗೇವಾಡಿ, ಬಸವನ ಬಾಗೇವಾಡಿ ತಾಲ್ಲೂಕು, ಬಿಜಾಪೂರ ಜಿಲ್ಲೆ.<br>2) ದಿ ಬ್ರ್ಯಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂಪನಿ ಲಿ., ಎಸ್.ಎಸ್. ಫ್ರಂಟ್ ರೋಡ್, ಬಿಜಾಪೂರ. |

**ಪ್ರಕಟಣೆ**

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ಶಿವಪ್ಪಾ ಎಂಬುವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ: 26.8.2003 ರಂದು ಮೃತ ಹೊಂದಿರುತ್ತಾರೆ ಎಂದು ಕಾರ್ಮಿಕರ ನಷ್ಟ ಪರಿಹಾರ ಕಾಯ್ದೆಯಡಿ ಪರಿಹಾರ ಧನಕ್ಕಾಗಿ ಕೋರಿ ಮೃತನ ಹೆಂಡತಿಯಾದ ನಾನು ಶ್ರೀಮತಿ ಸುಶೀಲವ್ವಾ ಎಂಬುವರು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದ ಕಾರಣ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ನಿಜವಾದ ಮೃತನ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳಲ್ಲಿ ಯಾವುದು ಮೊದಲು ಅದರೊಳಗೆ ಆಕ್ಷೇಪಣೆ ಅಥವಾ ಅರ್ಜಿಯನ್ನು ಸಲ್ಲಿಸಬಹುದಾಗಿದ್ದು ಯಾರಿಂದಲೂ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಂಡ ಅರ್ಜಿಯನ್ನೇ ಮುಂದಿನ ವಿಚಾರಣೆಗೆ ತೆಗೆದುಕೊಳ್ಳಲಾಗುವುದು ಮತ್ತು ನಂತರ ಬಂದ ಅರ್ಜಿಯನ್ನು ಸ್ವೀಕರಿಸಲಾಗುವುದಿಲ್ಲವೆಂದು ತಿಳಿಯುವುದು.

**ಜಿ. ಸಿದ್ಧಲಿಂಗಪ್ಪ ಆಲೂರು**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪವಿಭಾಗ-2, ಬಿಜಾಪೂರ ಜಿಲ್ಲೆ, ಬಿಜಾಪುರ.

ಪಿ.ಆರ್. 1393

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಹಾಸನ ಜಿಲ್ಲೆ, ಹಾಸನ**
**ಸಂಖ್ಯೆ: ಕಾಪಕಾ:ಎಫ್:ಎಸ್‌ಆರ್-90/2001**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1) ರತ್ನಮ್ಮ ಕೋಂ ಲೇಟ್ ನಂಜುಂಡೇಗೌಡ, ಸುಮಾರು 30 ವರ್ಷ.<br>2) ಸುಮ ಬಿನ್ ಲೇಟ್ ನಂಜುಂಡೇಗೌಡ, ಸುಮಾರು 16 ವರ್ಷ.<br>3) ಹರೀಶ್ ಬಿನ್ ಲೇಟ್ ನಂಜುಂಡೇಗೌಡ, ಸುಮಾರು 13 ವರ್ಷ.<br>4) ಬಸವೇಗೌಡ ಬಿನ್ ಬಸವೇಗೌಡ, ಸುಮಾರು 50 ವರ್ಷ. ವಾಸ: ಅಂಕನಾಯಕನಹಳ್ಳಿ, ಕಾವಲ್ ಗ್ರಾಮ, ಕಸಬಾ ಹೋಬಳಿ, ಅರಕಲಗೂಡು ತಾಲ್ಲೂಕು. | | 1) ಶ್ರೀ ಎಸ್. ವಿನಾಯಕಂ ಬಿನ್ ಶುಭಗೌಂಡರ್, ನಂ.22, ಪರಿಮಳ ನಗರ, ಕಂಠವೀರ ನಗರ ಅಂಚೆ, ಬೆಂಗಳೂರು.<br>2) ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ.ಲಿ., ಹೇಮಾಮಾನ್ಷನ್ ಗಾಂಧಿ ಬಜಾರ್, ಹಾಸನ. |

ಸಾರ್ವಜನಿಕ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಮೃತ ನಂಜುಂಡೇಗೌಡ ರವರು ಪ್ರತಿವಾದಿಗಳಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 13.5.2001 ರಂದು ಸಾವನಪ್ಪಿರುತ್ತಾರೆ ಎಂದು ಕಾರ್ಮಿಕ ನಷ್ಟ ಪರಿಹಾರವನ್ನು ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ

ಅಂಥಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸದೊಳಗಾಗಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಯಾರಿಂದಲೂ ಬಾರದೆ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನೇ ವಿಚಾರಣೆಗೆ ತೆಗೆದುಕೊಳ್ಳಲಾಗುವುದು.

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಹಾಸನ ಜಿಲ್ಲೆ, ಹಾಸನ.

ಪಿ.ಆರ್. 1394

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಚಾಮರಾಜನಗರ ಜಿಲ್ಲೆ**
**ಸಂಖ್ಯೆ: ಡಬ್ಲ್ಯೂಸಿಎ-40:2003, ದಿನಾಂಕ: 17ನೇ ನವೆಂಬರ್ 2003**
**ಸಾರ್ವಜನಿಕ ನೋಟೀಸ್**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಎ. ಮಣಿ ಕೋಂ ಲೇಟ್ ಸಂಪತ್‌ಕುಮಾರ್<br>2. ಮಧುಶ್ರೀ ಬಿನ್ ಲೇಟ್ ಸಂಪತ್‌ಕುಮಾರ್ ಸತ್ತೇಗಾಲ, ಪಾಳ್ಯ ಹೋಬಳಿ, ಕೊಳ್ಳೇಗಾಲ ತಾಲ್ಲೂಕು, ಚಾ:ನಗರ ಜಿಲ್ಲೆ.<br>3. ಮಂಚಮ್ಮ ಕೋಂ ರಾಮಯ್ಯ<br>4. ರಾಮಯ್ಯ ಬಿನ್ ದುಂಡಯ್ಯ ಕ್ಯಾತನಹಳ್ಳಿ, ಬಿ.ಜಿ.ಪುರ ಹೋಬಳಿ, ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ. | | 1. ಎನ್. ಚಂದ್ರಶೇಖರ್ ಬಿನ್ ನಿಂಗೇಗೌಡ, ಮುತ್ತನಹಳ್ಳಿ, ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ.<br>2. ದಿ ಬ್ರಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., ಎಂ.ಸಿ. ರೋಡ್, ಮಂಡ್ಯ. |

ಮೃತ ಸಂಪತ್‌ಕುಮಾರ್ ಇವರ ಹೆಂಡತಿಯಾದ 1ನೇ ಅರ್ಜಿದಾರರು ಶ್ರೀಮತಿ ಎ. ಮಣಿ 2ನೇ ಅರ್ಜಿದಾರರಾದ ಮಧುಶ್ರೀ ಲೇಟ್ ಸಂಪತ್‌ಕುಮಾರ್ ನವರ ಮಗಳು, 3ನೇ ಮತ್ತು 4ನೇ ಅರ್ಜಿದಾರರು ಮೃತ ಸಂಪತ್ ಕುಮಾರ್ ಇವರ ತಂದೆ ತಾಯಿಗಳಾಗಿದ್ದು, ಈ ನ್ಯಾಯಾಲಯದಲ್ಲಿ ದಿನಾಂಕ: 16.10.2003 ರಂದು ಅರ್ಜಿ ದಾಖಲಿಸಿ, 1ನೇ ಪ್ರತಿವಾದಿಯ ಟ್ರಾಕ್ಟರ್-ಟ್ರೈಲರ್ ನಲ್ಲಿ ಲೋಡರ್ ಅನ್‌ಲೋಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ ದಿನಾಂಕ: 14.7.2003 ರಂದು ಮರಣ ಹೊಂದಿದ್ದು, ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತನ ಆಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿ ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರಿಕರಿಗೂ ಹಾಗೂ ಸದರಿ ಮೃತನ ಬೇರೆ ಆಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿನಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಎನ್. ಕಲ್ಲುಮಾಳಿಗೆಗೌಡ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಾಮರಾಜನಗರ ಜಿಲ್ಲೆ, ಚಾಮರಾಜನಗರ.

ಪಿ.ಆರ್. 1395

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಚಾಮರಾಜನಗರ ಜಿಲ್ಲೆ**
**ಸಂಖ್ಯೆ: ಡಬ್ಲ್ಯೂಸಿಎ-42:2003, ದಿನಾಂಕ: 17ನೇ ನವೆಂಬರ್ 2003**
**ಸಾರ್ವಜನಿಕ ನೋಟೀಸ್**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಪ್ರಭಾವತಿ ಕೋಂ ಲೇಟ್ ಆನಂದಶೆಟ್ಟಿ.<br>2. ಪ್ರಮೋದ್ ಬಿನ್ ಲೇಟ್ ಆನಂದಶೆಟ್ಟಿ<br>3. ಪ್ರತಾಪ್ ಬಿನ್ ಲೇಟ್ ಆನಂದಶೆಟ್ಟಿ, ಸೋಮಹಳ್ಳಿ ಗ್ರಾಮ, ಬೇಗೂರು ಹೋಬಳಿ, ಗುಂಡ್ಲುಪೇಟೆ ತಾಲ್ಲೂಕು, ಚಾಮರಾಜನಗರ ಜಿಲ್ಲೆ. | | 1. ಎ.ಎನ್. ಬಸಪ್ಪ ಬಿನ್ ನಂಜಪ್ಪ, ಮುಂಜಿಪುರ ಗ್ರಾಮ, ಬರ್ಗಿ ಅಂಚೆ, ಗುಂಡ್ಲುಪೇಟೆ ತಾಲ್ಲೂಕು, ಚಾಮರಾಜನಗರ ಜಿಲ್ಲೆ.<br>2. ವಿಭಾಗೀಯ ವ್ಯವಸ್ಥಾಪಕರು, ದಿ ಓರಿಯಂಟಲ್ ಇನ್ಸೂರೆನ್ಸ್ ಕಂ. ಲಿ., ಮುಸ್ಲಿಂ ಹಾಸ್ಟೆಲ್ ಕಾಂಪ್ಲೆಕ್ಸ್, ಸರಸ್ವತಿಪುರಂ, ಮೈಸೂರು. |

ಮೃತ ಆನಂದಶೆಟ್ಟಿ ಇವರ ಹೆಂಡತಿಯಾದ ಪ್ರಭಾವತಿ, 2ನೇ ಅರ್ಜಿದಾರರಾದ ಪ್ರಮೋದ್ ಮತ್ತು 3ನೇ ಅರ್ಜಿದಾರರಾದ ಪ್ರತಾಪ್ ಇವರುಗಳು ಮೃತ ಆನಂದಶೆಟ್ಟಿಯವರ ಮಕ್ಕಳಾಗಿದ್ದು, ಈ ನ್ಯಾಯಾಲಯದಲ್ಲಿ ದಿನಾಂಕ: 10.11.2003 ರಂದು ಅರ್ಜಿ ದಾಖಲಿಸಿ ಮೃತ ಆನಂದಶೆಟ್ಟಿ 1ನೇ ಪ್ರತಿವಾದಿಯಲ್ಲಿ ಲೋಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ ಅಪಘಾತ ಹೊಂದಿ ದಿನಾಂಕ: 10.9.2003 ರಂದು ಬೆಳಿಗ್ಗೆ ಸುಮಾರು 10.00 ಗಂಟೆಗೆ ಮರಣಹೊಂದಿರುತ್ತಾರೆಂದು ಹಾಗೂ ಮೇಲೆ ತಿಳಿಸಿರುವ ಅರ್ಜಿದಾರರು ಮೃತರ ಆಶ್ರಿತರೆಂದು ತಮಗೆ ನಷ್ಟ ಪರಿಹಾರ ಕೊಡಿಸಿಕೊಡಬೇಕೆಂದು ಕ್ಲೈಂ ಅರ್ಜಿ ದಾಖಲು ಮಾಡಿರುತ್ತಾರೆ.

ತತ್ಸಂಬಂಧವಾಗಿ ಸಮಸ್ತ ನಾಗರಿಕರಿಗೂ ಹಾಗೂ ಸದರಿ ಮೃತನ ಬೇರೆ ಆಶ್ರಿತರು ಯಾರಾದರೂ ಇದ್ದಲ್ಲಿ ಅವರಿಗೂ ಈ ಮೂಲಕ ತಿಳಿಯಪಡಿಸುವುದೇನೆಂದರೆ ಅವರು ಈ ನ್ಯಾಯಾಲಯದ ಮುಂದೆ ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ಮೂವತ್ತು ದಿವಸಗಳೊಳಗಾಗಿ ನಷ್ಟ ಪರಿಹಾರಕ್ಕೆ ಅರ್ಜಿ ಹಾಕಿಕೊಳ್ಳಬಹುದೆಂದು ತಿಳಿಯಪಡಿಸಲಾಗಿದೆ. ಅವಧಿ ಮೀರಿ ಬಂದ ಅರ್ಜಿಯನ್ನು ಮಾನ್ಯ ಮಾಡಲಾಗುವುದಿಲ್ಲ.

**ಎನ್. ಕಲ್ಲುಮಾಳಿಗೆಗೌಡ**
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಾಮರಾಜನಗರ ಜಿಲ್ಲೆ, ಚಾಮರಾಜನಗರ.

ಪಿ.ಆರ್. 1397